ಜನಪ್ರಿಯ ಕಲಾಮಾಲಿಕೆ

# ಅಬ್‌ಸ್ಟ್ರ್ಯಾಕ್ಟ್ ಕಲೆ

ಆರ್. ಎ. ಶಾಂತರಾಜ್




ಕರ್ನಾಟಕ ಲಲಿತಕಲಾ ಅಕಾಡೆಮಿ

# ಅಮೂರ್ತ ಕಲೆ

ಆರ್. ಎ. ಶಾಂತರಾಜ್



ಕರ್ನಾಟಕಲಲಿತಕಲಾ

ಕರ್ನಾಟಕ ಲಲಿತಕಲಾ ಅಕಾಡೆಮಿ
ನೃಪತುಂಗ ರಸ್ತೆ, ಬೆಂಗಳೂರು-560 002

**ABSTRACT ART** *by R. A. Shantaraj*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : **ಪಾಲ್ ಕ್ಲೇ**

ಸಂಪಾದಕರು : **ಎಚ್. ಎ. ಅನಿಲಕುಮಾರ್**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

# ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

ಸಿ. ಚಂದ್ರಶೇಖರ
ಅಧ್ಯಕ್ಷರು

**ABSTRACT ART** *by R. A. Shantaraj*
*Published by K. Mukundan, Registrar*
*Karnataka Lalithakala Academy*
*Nrupatunga Road, Bangalore-560 002*

First Impression : 1995

**ಬೆಲೆ : ರೂ. 5-00**

ಮುಖಚಿತ್ರ : **ಪಾಲ್ ಕ್ಲೇ**

ಸಂಪಾದಕರು : **ಎಚ್. ಎ. ಅನಿಲಕುಮಾರ್**

ಮುದ್ರಣ
**ಲಕ್ಷ್ಮಿ ಮುದ್ರಣಾಲಯ**
ಚಾಮರಾಜಪೇಟೆ, ಬೆಂಗಳೂರು-18
ದೂರವಾಣಿ: 6618752, 6613123

## ಒಂದು ಮಾತು

ಕರ್ನಾಟಕ ಲಲಿತಕಲಾ ಅಕಾಡೆಮಿಯು ಇದುವರೆಗೆ ಕಲೆ ಮತ್ತು ಕಲಾವಿದರಿಗೆ ಸಂಬಂಧಿಸಿದಂತೆ ಅನೇಕ ಪುಸ್ತಕಗಳನ್ನು ಪ್ರಕಟಿಸುತ್ತಾ ಬಂದಿದೆ. ಪ್ರಸ್ತುತ ಅಕಾಡೆಮಿಯು ಜನಪ್ರಿಯ ಕಲಾ ಮಾಲಿಕೆಯಡಿಯಲ್ಲಿ ಸುಲಭ ದರದಲ್ಲಿ ಜನಸಾಮಾನ್ಯರಿಗೂ ಕಲೆಯು ಅರ್ಥವಾಗಲಿ ಎಂಬ ಉದ್ದೇಶದಿಂದ ದೃಶ್ಯಕಲೆ, ಕಲೆಯ ರಸಸ್ವಾದನೆ, ಕಲಾ ಪಂಥಗಳು ಈ ವಿಷಯವಾಗಿ ಕಿರು ಪುಸ್ತಕಗಳನ್ನು ಹೊರತರುತ್ತಿದೆ.

ಈ ಮಾಲಿಕೆಯ ಪುಸ್ತಕಗಳನ್ನು ಓದುವುದರಿಂದ ಜನಸಾಮಾನ್ಯರಲ್ಲಿ ಕಲಾ ಇತಿಹಾಸವನ್ನು ಪರಿಚಯಿಸುತ್ತಾ ಕಲಾಕೃತಿಯನ್ನು ನೋಡಿ, ಗ್ರಹಿಸಿ, ರಸಸ್ವಾದನೆ ಮಾಡಿ ಗುಣ ಮೌಲ್ಯಗಳ ಬಗ್ಗೆ ಹೆಚ್ಚಿನ ಆಸಕ್ತಿಯನ್ನು ಹೊಂದಿ ಉತ್ತಮ ಗುಣ ಮೌಲ್ಯವುಳ್ಳ ಕಲಾಕೃತಿಯನ್ನು ಸಂಗ್ರಹಿಸುವಲ್ಲಿ ಆಸಕ್ತಿ ಮೂಡುತ್ತದೆಯೆಂಬ ಆಶಯ ನಮ್ಮದಾಗಿದೆ.

ಈ ಮಾಲಿಕೆಯಲ್ಲಿ ಪುಸ್ತಕಗಳನ್ನು ಚಿತ್ರಯಾತ್ರೆಯ ಸಂದರ್ಭದಲ್ಲಿ ಹೊರತರುತ್ತಿರುವುದು ಔಚಿತ್ಯಪೂರ್ಣವಾಗಿದೆ. ಚಿತ್ರಯಾತ್ರೆಯು ನಾಡಿನಾದ್ಯಂತ ಸಂಚರಿಸುವಾಗ ಎಲ್ಲಾ ಪುಸ್ತಕಗಳು ನಾಡಿನ ಮೂಲೆ ಮೂಲೆಗೂ ತಲುಪಬೇಕೆಂಬುದು ನಮ್ಮ ಉದ್ದೇಶವಾಗಿದೆ. ಈ ಮಾಲಿಕೆಯಲ್ಲಿ ಬರೆದಿರುವ ಲೇಖಕರೆಲ್ಲರೂ ಸಂಬಂಧಪಟ್ಟ ವಿಷಯದಲ್ಲಿ ಪರಿಣತರೇ ಆಗಿದ್ದಾರೆ. ನಮಗೆ ಅತ್ಯಂತ ಕಡಿಮೆ ಅವಧಿಯಲ್ಲಿ ಈ ಕಿರುಹೊತ್ತಿಗೆಗಳನ್ನು ಬರೆದುಕೊಟ್ಟ ಕಲಾ ಲೇಖಕರಿಗೆ ಆಭಾರಿಯಾಗಿದ್ದೇವೆ. ನಮ್ಮ ಈ ಪ್ರಯತ್ನವನ್ನು ಕಲಾವಿದರೂ, ಕಲಾಸಕ್ತರೂ ತುಂಬು ಹೃದಯದಿಂದ ಸ್ವಾಗತಿಸಿ ಪ್ರೋತ್ಸಾಹಿಸುತ್ತಾರೆಂದು ನಂಬಿದ್ದೇವೆ.

**ಸಿ. ಚಂದ್ರಶೇಖರ**
ಅಧ್ಯಕ್ಷರು

# ಅಮೂರ್ತ ಕಲೆ

## ಕಲೆ ಒಂದು ಕ್ರಿಯೆ

ಒಂದು ಸಮಾಜದ ಮತ್ತು ಪರಿಸರದ ಹಿನ್ನೆಲೆಯಲ್ಲಿ ಸಾರ್ವಕಾಲಿಕ ಬೆಲೆಯನ್ನುಳ್ಳ ಸಾಂಸ್ಕೃತಿಕ ಚಟುವಟಿಕೆಗಳು, ಕ್ರಿಯಾತ್ಮಕ ಕೆಲಸಗಳು ನಡೆಯುತ್ತವೆ. ತಮ್ಮ ಪ್ರಮುಖ ಪಾತ್ರವನ್ನು ಒಂದು ನೆಲೆಯಲ್ಲಿ ವಹಿಸುತ್ತಿರುತ್ತವೆ. ಇಂತಹ ಸೃಜನಾತ್ಮಕ ಕ್ರಿಯೆಗಳು ಮಾನವನ ಅರ್ಥಗ್ರಹಿಕೆಯ ಪ್ರಕೃತಿಯೆ ಆಗಿವೆ. ಅಭಿವ್ಯಕ್ತಿಯ ಮೂಲಸೆಳೆಗಳೂ ಆಗಿವೆ. ಆದ್ದರಿಂದಲೇ ಕಲೆ ಒಂದು ಕ್ರಿಯೆಯಾಗಿದೆ.

ಪ್ರಕೃತಿ ಹಾಗೂ ಪರಿಸರದ ಕುತೂಹಲ ಪ್ರಜ್ಞೆಯ ಆಸಕ್ತಿ ಕೇಂದ್ರವಾದ ಮಾನವನ ಮನಸ್ಸು ಮತ್ತು ಬುದ್ಧಿ, ಎರಡೂ ಸಹಜವಾಗಿ ಭಾವನೆ, ಕಲ್ಪನೆಗಳನ್ನು ಕಾಣುವಂತಾಗಿವೆ. ಆದರೆ ಇವುಗಳನ್ನು ಸ್ಪಷ್ಟವಾಗಿ ತಿಳಿಸುವ ಬಯಕೆ ಮತ್ತು ತುಡಿತಗಳಿಗೆ ಸಹಜವಾದ ಆಧಾರವೊಂದು ಬೇಕಾದದ್ದು ಮಾಧ್ಯಮ. ಈ ರೀತಿಯ ಮಾಧ್ಯಮವೊಂದರ ಬಳಕೆ ಸುಲಭವಾಗಿ ಸಾಧ್ಯವಾದದ್ದೂ ಚಿತ್ರದ ಮೂಲಕವೇ. ಚಿತ್ರ ಚಿತ್ರವಾಗಿರದೆ ಒಂದು ಭಾಷೆಯ ಅರ್ಥಗಳನ್ನು ತಿಳಿಸುವ ಮೂಲವಾದದ್ದು ಅನಂತರವಾದರೂ, ಚಿತ್ರದ ಭಾಷೆಯು, ಇನ್ನೊಂದು ಭಾಷೆ ಹೇಳುವ ಅನೇಕ ವಿವರಣೆಗಳ ವಿಷಯಕ್ಕಿಂತ ಭಿನ್ನವಾದದ್ದು. ಅದಕ್ಕಿಂತಲೂ ಪರಿಣಾಮಕಾರಿಯಾದದ್ದು, ಈ ಚಿತ್ರಭಾಷೆಯನ್ನು ಸುಲಲಿತವಾಗಿ ರೂಢಿಸಿಕೊಂಡ ನಮ್ಮ ಪೂರ್ವಜರು(ಆದಿವಾಸಿಗಳು) ಹಲವಾರು ದಾಖಲೆಯ ಅಂಶಗಳಲ್ಲಿ ತಮ್ಮನ್ನು ತಾವೇ ಆಶ್ಚರ್ಯಗೊಳಿಸಿಕೊಂಡಿದ್ದಾರೆ. ಆಸಕ್ತಿಯ ಮೂಲಕೇಂದ್ರವಾಗಿರುವಂತೆಯೇ, ಬೆರಗುಗೊಳಿಸುವ ವಾಸ್ತವ ಜಗತ್ತಿನ ಪ್ರಾಣಿ, ಪಕ್ಷಿ-ಗಿಡ-ಮರಗಳಲ್ಲದೆ, ನಿತ್ಯಜೀವನದ ಶೈಲಿಯನ್ನೆ ಸೆರೆಹಿಡಿದು, ಸೂಕ್ಷ್ಮ ಪ್ರಜ್ಞೆಯನ್ನು ಕಂಡುಕೊಂಡ ಮಾನವನ ಚಿತ್ರ ಜಗತ್ತಿನ ಸೃಷ್ಟಿ, ಹೊಸ ಹೊಸ ಕಲ್ಪನೆಗಳಿಗೆ ದಾರಿಯಾಗಿದೆ. ಹೊಸ ಅನುಭವವೇ ಇಲ್ಲದಿದ್ದ ಸಂದರ್ಭದಲ್ಲಿ ಆದಿಮಾನವನ ಮುಗ್ಧ ಅಭಿವ್ಯಕ್ತಿಯ ಸಾಧನವಾದ ಚಿತ್ರಗಳು ಮುಕ್ತ ಭಾಷೆಯೊಂದರ ವಿವರಣೆ ನೀಡುವ ಕಲೆಯಾದದ್ದು, ಒಂದು ಜನಾಂಗದ ನೆಲೆಗಳನ್ನು ತಿಳಿಸಿದೆ. ಮಾನವ ಬೆಳೆದು - ಜೀವಿಸಿದ, ಅದರ ರೀತಿಗಳನ್ನು ತನ್ನದೇ ರೂಪಗಳಲ್ಲಿ ಚಿತ್ರಿಸಿದ ಮತ್ತು ಅರಿವು ನಂಬಿಕೆ-ಆಚರಣೆ-ಬೆಳವಣಿಗೆಯನ್ನು ಕಾಣುವ ಜನಾಂಗೀಯ ಸಂಸ್ಕೃತಿಯೊಂದರ ಮೂಲಸೃಷ್ಟಿ ಎನ್ನಿಸಿಕೊಂಡ.

ಸೃಷ್ಟಿ-ಪುನರ್‌ಸೃಷ್ಟಿಯ ಅಗೋಚರ ವಸ್ತುಗಳು, ಸಮಯ ಸನ್ನಿವೇಶಗಳಲ್ಲಿ ಹೊಸ

ಅನುಭವದ ಭಿನ್ನ ನೆಲೆಗಳಲ್ಲಿ ರೂಪಪಡೆಯುವುವಾದ್ದರಿಂದ ಅಲ್ಲಿಯ ಕಲ್ಪನೆಯು ಗರಿದೆರೆಯುವ ಮುಕ್ತತೆ, ಒಂದು ಭಾವ ತೀವ್ರತೆಯ ಮೂಲದಲ್ಲಿರುತ್ತದೆ. ಅದನ್ನು ಜಾಗೃತಗೊಳಿಸುವ ಮನಸ್ಸು ಯಾವುದೇ ಕ್ರಿಯೆಯ ಮೂಲಕ ವ್ಯಕ್ತಪಡಿಸಬಹುದು. ಈ ವ್ಯಕ್ತ-ಅವ್ಯಕ್ತಗಳ ನಡುವಿನ ಹುಡುಕಾಟದಲ್ಲಿ ಅಭಿವ್ಯಕ್ತಗೊಳಿಸಲು ಕಂಡುಕೊಂಡ ಉತ್ತಮ ಮಾಧ್ಯಮಗಳಲ್ಲಿ ಚಿತ್ರಕಲೆಯೂ ಒಂದು. ಈ ಚಿತ್ರದ ಭಾಷೆಯೊಡನೆ ಕಣ್ಣು, ಮನಸ್ಸುಗಳು ಹೇಗೆ ಕೇಂದ್ರೀಕೃತವೋ ಹಾಗೆಯೇ ಬೌದ್ಧಿಕ ಕ್ರಿಯೆಯ ತೀವ್ರತೆಯೂ ಮುಖ್ಯವಾಗುತ್ತದೆ. ಚಿತ್ರ ನೀಡುವ ಆವಶ್ಯಕ ಗುಣಗಳಲ್ಲಿಯ ಮೌಲ್ಯಗಳು, ಜ್ಞಾನ-ವಿಜ್ಞಾನ, ತಂತ್ರ, ಆನಂದದ ಅನುಭವ ಇತ್ಯಾದಿಗಳು ಸೌಂದರ್ಯದ ಹಾದಿಯಲ್ಲಿ ಕಲಾತ್ಮಕ ಹಂತವನ್ನು ತಲುಪಬೇಕಾಗುತ್ತದೆ. ಆದರೆ ಕಲಾತ್ಮಕವಾದದ್ದೆಲ್ಲವೂ ಆನಂದ ಸಂತೋಷ ನೀಡುವುದಿಲ್ಲ. ಬಹಳ ಆವಶ್ಯಕವಾದಂತೆ ಕಲೆಯೊಂದರ ಸತ್ಯ-ಅಸತ್ಯಗಳು ಸೂಕ್ಷ್ಮ ಅಭಿವ್ಯಕ್ತಿಯೊಂದರ ಸಾಧನವಾಗಿರುತ್ತವೆ. ಈ ಸಾಧನೆಯ ಸೃಷ್ಟಿಕ್ರಿಯೆಯಿಂದಲೇ ಕಲೆಯೊಂದರ ಹುಟ್ಟು ಸಾಧ್ಯವಾಗುವುದರಿಂದ ಕಲೆ, ಕಲೆಯಾಗಿಯೇ ಉಳಿಯುವ ಅರ್ಥವಿವರಣೆಯೂ ಇದಾಗುತ್ತದೆ. ಹಾಗಾದರೆ ಕಲೆ ಎಂದರೇನು ಎನ್ನುವ ಪ್ರಶ್ನೆಗೆ, ಮರು ಪ್ರಶ್ನೆಗಳುಂಟಾಗಿ ಮನಸ್ಸಿನ ಕೆರಳಿಕೆ ಸಹಜವಾಗಬಹುದು. ಹಾಗಾದರೆ ಕಲೆ ಎಂದರೇನು? ಮುಂದೆ ನೋಡೋಣ.

ಕಲೆ ಎಂದರೇನು? ಎನ್ನುವ ಪ್ರಶ್ನೆಯೊಂದರಿಂದಲೆ ಹುಟ್ಟಿಕೊಳ್ಳಬಹುದಾದ ವಿವರಣೆಗಳು ಅನೇಕವಿವೆ. ಒಂದು ಸಾಂದರ್ಭಿಕ ಹಿನ್ನೆಲೆಯಲ್ಲಿ ತನ್ನನ್ನು ತಾನೇ ಬಿಚ್ಚಿಡುತ್ತಾ (ವ್ಯಕ್ತಪಡಿಸುತ್ತಾ) ಹೋಗುವ ಸೂಕ್ಷ್ಮ ನೆಲೆಗಳ ಚಿತ್ರಕೃತಿಯನ್ನೆ ನಾವು ಕಲೆ ಎನ್ನುತ್ತೇವೆ. ಅಂದರೆ ಅದು ಆಂತರಿಕ ಮೂಲದಲ್ಲಿದ್ದು, ನಂತರದ ಸೃಷ್ಟಿಯಾಗುವ ಕ್ರಿಯಾಶಕ್ತಿ ಪ್ರತಿಭೆ/ಅಭಿವ್ಯಕ್ತಿ. ಇಂದು ನಾವು ಕರೆಯುವ ಲಲಿತಕಲೆಗಳಲ್ಲೆಲ್ಲ ಇರಬಹುದಾದ ಅಂಶಗಳನ್ನು ಗಮನಿಸಿದರೆ (ಪ್ರದರ್ಶಕ ಕಲೆಗಳಲ್ಲಿ) ಅಲ್ಲಿ ವ್ಯಕ್ತವಾಗುವ ವಸ್ತು, ವಿಧಾನ, ಸಾಧನ, ರೀತಿ ಇತ್ಯಾದಿಗಳು ಮುಖ್ಯವಾಗಿರುತ್ತವೆ. ಚಿತ್ರ ಶಿಲ್ಪ-ನೃತ್ಯ-ನಾಟಕ-ಸಂಗೀತ ಇತ್ಯಾದಿಗಳೆಲ್ಲವೂ ಕಲಾಪ್ರಕಾರದ ಕಲಾಮಾಧ್ಯಮಗಳಾಗಿವೆ. ಇವುಗಳಲ್ಲಿ ಮಹತ್ವದ ಸ್ಥಾನ ಪಡೆದಿರುವ ಚಿತ್ರ-ಸಂಗೀತ ಕಲೆಗಳಲ್ಲಿ ಮುಖ್ಯವಾಗಿ ಚಿತ್ರಕಲೆಯನ್ನು ಕುರಿತು ಬರೆಯುತ್ತಿರುವ ಈ ಸನ್ನಿವೇಶದಲ್ಲಿ ಚಿತ್ರಕಲೆಗಿರುವ ಮಹತ್ವದ ಸ್ಥಾನವನ್ನು ಗುರುತಿಸುವುದಾಗಿದೆ. ಇದೊಂದು ವ್ಯಕ್ತಿಗತವಾದ ಹಾಗೂ ವಸ್ತುನಿಷ್ಠವಾದ ಕಲೆಯೂ ಹೌದು. ಸಾರ್ವತ್ರಿಕ ಬೆಲೆಯುಳ್ಳ ಕಲೆಯೂ ಹೌದು. ಇದಕ್ಕೆ ಪೂರಕವಾದ ಕಲೆಯೆಂದರೆ ಸಂಗೀತವೊಂದೆ. ಏಕೆಂದರೆ ಒಂದು ರೀತಿಯಲ್ಲಿ ಎರಡೂ ಕಲೆಗಳೂ **ಅಮೂರ್ತವಾದದ** ಹತ್ತಿರದಲ್ಲಿರುವ ಕಲೆಗಳಾಗಿವೆ. ಒಂದರ ಭಾವತಾದ್ಯಾತ್ಮ್ಯಗಳು, ತಲ್ಲೀನತೆಗಳೂ ಇನ್ನೊಂದರಲ್ಲಿಯೂ ಇರುವುದರಿಂದ ಇಲ್ಲಿಯ ಅನಿಸಿಕೆ-ಅಭಿಪ್ರಾಯಗಳು ನಿರ್ದ್ಯಾಕ್ಷಿಣ್ಯವಾದಂತವು. ಇವುಗಳನ್ನರಿತ, ನುರಿತ ಕಲಾವಿದನೊಬ್ಬ ವ್ಯಕ್ತಗೊಳಿಸುವ ಕಲೆ ಕಲಾತ್ಮಕವಾದದ್ದೇ ಆಗಿರುತ್ತದೆ. ಆಗ ಕಲಾವಿದನೊಬ್ಬನು ಚಿತ್ರಿಸಿದ ಯಾವುದೇ ಕಲಾಕೃತಿಯೊಂದನ್ನು ನೋಡಿದಾಗ, ನಿರ್ಲಿಪ್ತವಾದ ಆನಂದ-ಸಂತೋಷಗಳು ಹೊಸತನಗಳಾಗಿ ಕಾಣಿಸಿಕೊಳ್ಳುತ್ತವೆ. ಅನುಭವದ ರಸಾನುಭವವುಂಟಾಗುತ್ತಿರುತ್ತದೆ. ಇದನ್ನೆ ಸೌಂದರ್ಯಾನುಭವಕ್ಕೂ ಹೋಲಿಸುತ್ತೇವೆ.

ನಿಜವಾದ ಕಲೆಯೆನ್ನುತ್ತೇವೆ. ಅಂದರೆ ಕಲಾಕೃತಿಯೊಂದು ಒಳಗೊಂಡಿರಬಹುದಾದ ಅಂಶಗಳ ಮೂಲಕ ಕಲೆಯನ್ನು ಅನುಭವಿಸಿ, ಅದು ಏನೆನ್ನುವುದನ್ನು ತಿಳಿಯುವ ವಿವರ ಸ್ಪಷ್ಟವಾಯಿತು.

## ಚರಿತ್ರೆಯೊಳಗೆ

ಚಿತ್ರಕಲೆಯ ನೆಲೆಗಳನ್ನು ನಾವು ಗುರ್ತಿಸುತ್ತಾ ಬಂದಿರುವುದು ಪುರಾತನ ಕಾಲದ ಗುಹಾಚಿತ್ರಗಳಿಂದ. ಆದಿಮಾನವನ ಈ ಚಿತ್ರಗಳು ಆಸಕ್ತಿಯಿಂದ ಕೂಡಿದ್ದರೂ ಕುತೂಹಲ ಕೇಂದ್ರಿತವಾದಂತವು. ಬಂಡೆ-ಹೆಬ್ಬಂಡೆಗಳ ಮೇಲೆ, ಕಾಡುಗುಹೆಗಳಲ್ಲಿ ಅರಳಿದ ಈ ಗುಹಾಚಿತ್ರಗಳು ನೈಸರ್ಗಿಕ ಪರಿಸರದಲ್ಲಿ ದಾಖಲಾದ ಅಸಾಧಾರಣ ಸಾಧನೆಯ ಅಭಿವ್ಯಕ್ತಿಗಳಾಗಿವೆ. ಈ ಚಿತ್ರಗಳೆಲ್ಲ ವಿಶಿಷ್ಟ ಛಾಪಿನಿಂದ ಒಂದು ಭಾಷೆಯನ್ನುವಂತೆ ಸ್ಪಂದಿಸುವುದಲ್ಲದೆ ಆದಿಮಾನವನ ಚಿತ್ರರಚನೆಯ ಶೈಲಿ, ತೀವ್ರತೆ ಹಾಗೂ ಆಲೋಚನೆಗಳನ್ನು ತಿಳಿಸುತ್ತವೆ. ಇಂದು ವಿಶೇಷವಾಗಿ ಚರ್ಚಿಸುವ ಸೃಷ್ಟಿಕ್ರಿಯೆಯ ಮೂಲ, ಸ್ವರೂಪ-ವಿರೂಪಗಳನ್ನು ಕುರಿತು ಹೇಳುವಾಗ, ವಸ್ತುಸ್ಥಿತಿಯ ಕಲ್ಪನೆಯು ಸಮಂಜಸ ಎನ್ನಿಸುವಂತೆ ಇರುವ ಚರಿತ್ರೆಯೊಳಗಿನ ಕಲಾಸಂದರ್ಭಗಳನ್ನು ಗಮನಿಸುವುದು ಸೂಕ್ತ. ಕಲಾಭಿವ್ಯಕ್ತಿಯ ಬಹಳಷ್ಟು ಅಂಶಗಳು ಸಂಸ್ಕೃತಿಯ ಕುರುಹುಗಳಾಗಿಯೇ ಇವೆ. ಇವುಗಳೆಲ್ಲ ಒಂದು ನಾಗರೀಕತೆಯ ಕೊಡುಗೆಯಾಗಿ ಬೆಳೆದು ಬಂದಿರುವುದಲ್ಲದೇ, ಸಾಂಸ್ಕೃತಿಕ ಸಂದರ್ಭದ ಭಾಗವಾಗಿರುವುದನ್ನು ಗಮನಿಸಿದರೆ ಅಂದಿನ ಉತ್ಕಟ ಬಯಕೆಗಳೂ ಸಾಮಾನ್ಯವಾಗಿರುವಂತಿವೆ. ಶತಮಾನಗಳಷ್ಟು ಹಳೆಯದಾದ ಗ್ರೀಕ್, ರೋಮ್, ಈಜಿಪ್ಟ್, ಬ್ಯಾಬಿಲೋನ್, ಲುರಿಸ್ತಾನ್, ಪರ್ಷಿಯಾ ದೇಶಗಳಂತೆ, ಸಿಂಧೂ ಸಂಸ್ಕೃತಿಯ ನೆಲೆಗಳಲ್ಲಿ ಪುರಾತನ ನಾಗರೀಕತೆಯನ್ನು ಹೊಂದಿರುವ ಭಾರತ ಕೂಡ, ಪುರಾತನ ಕಲೆಗಳ ಸಾಲಿನಲ್ಲಿ ಸೇರಿದ್ದು, ಅನೇಕ ಕಲೆಗಳ ದಾಖಲೆಗೆ ಮೂಲ ನೆಲೆಯಾಗಿದೆ. ಅಂತೆಯೆ ಚಿತ್ರ-ಶಿಲ್ಪಗಳು ನಿತ್ಯ ಹೊಸದಾಗುವ ನಿಟ್ಟಿನಲ್ಲಿ ಯೋಚಿಸುವಂತೆ ಮಾಡಿವೆ.

ಧರ್ಮ-ಪುರಾಣ-ಸಂಪ್ರದಾಯಗಳ ಸಾಂಕೇತಿಕ ಅರ್ಥಗಳನ್ನೆ ಹೆಚ್ಚಾಗಿ ಹೊಂದಿರುವ ಚಿತ್ರಶಿಲ್ಪಗಳ ವಸ್ತುಗಳು ಹೆಚ್ಚಾಗಿ ಪುರಾಣಕ್ಕೆ(Myths)ಸಂಬಂಧಿಸಿವೆ. ವಾಸ್ತವದ ಪ್ರಜ್ಞೆಯೂ ಸಾಮಾನ್ಯವಾಗಿರುವುದರಿಂದ, ಕಲಾಪ್ರತಿಭೆ ಹಾಗೂ ದೈತ್ಯ ಕೆಲಸಗಳನ್ನು ಮೆಚ್ಚಲೇಬೇಕಾಗಿದ್ದಾಗಿದೆ. ಈ ದೃಷ್ಟಿಯಲ್ಲಿಯೇ ಇತಿಹಾಸ ಕಾಲದ ಬದಲಾವಣೆ ಪುನಃ ಪುನಃ ಆಗುತ್ತಾ ಬಂದಿದ್ದರೂ ಚಿತ್ರಕಲೆಯಲ್ಲಿ ನಿರ್ದಿಷ್ಟ ಘಟ್ಟಗಳಲ್ಲಿ ದಾಖಲಾಗುತ್ತಾ ಬಂದಿದೆ. ಇಲ್ಲಿ ಚಿತ್ರ-ಶಿಲ್ಪಗಳೆರಡರ ನಡುವಿನ ಸಂಬಂಧ ಪೂರಕವಾಗಿದ್ದರೂ ಚಿತ್ರಕಲೆಯ ಪ್ರಾಮುಖ್ಯತೆ ಹೆಚ್ಚು ವಿಸ್ತಾರವಾದದ್ದು. ಪ್ರಸ್ತುತ ಚಿತ್ರಕಲೆಯ ಬೆಳವಣಿಗೆಯನ್ನು ನೋಡುವಾಗ ಹಿಂದಿನ ಬೆಳವಣಿಗೆಯ ಹಾದಿಯನ್ನು ಗಮನಿಸಬೇಕಾಗುತ್ತದೆ. ಮಾಧ್ಯಮವೊಂದರಲ್ಲಿ ಗೋಚರಿಸುವ ನೈಜವಸ್ತುಗಳು (Natural object), ಅರ್ಥಪೂರ್ಣ ವಿಷಯಗಳು(Meaningful subject) ಹೊಂದಿರುವ ಸಂಕೇತ(Symbol)ಗಳಲ್ಲಿ ನೀಡಿದ ಕಾಲ್ಪನಿಕ ರೂಪದ (Imaginary forms) ಚಿತ್ರಗಳೆಲ್ಲ ಒಂದೇ ನೆಲೆಯಲ್ಲಿರುವುದನ್ನು ಕಾಣಬಹುದು. ಕ್ರಮೇಣ

ಒಂದು ನಿಟ್ಟಿನಲ್ಲಿ ಪ್ರಾರಂಭವಾದ ಬೌದ್ಧಿಕ ತಿರುವು, ವೈಚಾರಿಕ ದೃಷ್ಟಿಯನ್ನು ಬೆಳೆಸಿಕೊಳ್ಳಲು, ಹೊಸದನ್ನು ಚಿತ್ರಿಸಲು, ಹಳೆಯ ವಸ್ತುಗಳನ್ನೇ-ವಿಷಯಗಳನ್ನೇ ಭಿನ್ನಗೊಳಿಸಿದ ಒಟ್ಟು ಸ್ವರೂಪದ ಬದಲಾವಣೆಯನ್ನು ಪ್ರಾಯೋಗಿಕ ಅಂಶಗಳಲ್ಲಿಯೂ ಕಾಣುತ್ತೇವೆ. ಈ ರೀತಿ ಬದಲಾವಣೆಯಾದದ್ದು ಹದಿನೈದು-ಹದಿನಾರನೆಯ ಶತಮಾನದಲ್ಲಾದರೂ ಅದರ ತೀವ್ರತೆಯು ಹೆಚ್ಚಾದದ್ದು ಹದಿನೇಳು-ಹದಿನೆಂಟನೆಯ ಶತಮಾನಗಳಲ್ಲಿ. ಆದರೂ ಕಲಾತ್ಮಕ ಅಂಶಗಳಲ್ಲಿ ಬದಲಾವಣೆಯ ಸಂಪೂರ್ಣ ಸ್ವಾತಂತ್ರ್ಯ ಲಭಿಸಿದ್ದು ಹದಿನೆಂಟು-ಮತ್ತು ಹತ್ತೊಂಬತ್ತನೆಯ ಶತಕದಲ್ಲಿ. ಈ ಅವಧಿಯಲ್ಲಿ ವೈರುಧ್ಯ ದಿಕ್ಕಿನೆಡೆಗೆ ಸಾಗಿದ ಕಲೆಯ ಆವಶ್ಯಕ ಅಂಶಗಳು ಪ್ರಪಂಚದ ಎಲ್ಲಾ ದೇಶಗಳ ಜನರನ್ನು ಆಸಕ್ತರನ್ನಾಗಿಸಿದವು. ಪ್ರಯೋಗಶೀಲರಾದ ಪಾಶ್ಚಾತ್ಯ ಕಲಾವಿದರು, ಯುರೋಪಿನ ಕಲಾವಿದರು ಚಿತ್ರಕಲೆಯ ಹೊಸ ದೃಷ್ಟಿಕೋನಗಳನ್ನು ತಮ್ಮಲ್ಲಿಯೇ ವಿಮರ್ಶಿಸಿಕೊಂಡರು. ಇದರ ಪರಿಣಾಮವಾಗಿ ಬಾರೋಕ್-ರೊಕೊಕೋದಿಂದ (Baroque-Rococco)ದೂರಸರಿದ ಜನ ರೊಮ್ಯಾಂಟಿಸಿಸಂ-ರಿಯಲಿಸಂನಿಂದಲೂ ದೂರವಾಗಿ, ಹೊಸವಿಧಾನಗಳನ್ನರಸಿಕೊಂಡು ಬಹಳ ದೂರ ಬಂದ ನಂತರ, ಸ್ವತಂತ್ರ ಮನೋಭಾವದ ಅಭೀಪ್ಸೆಯನ್ನು ವ್ಯಕ್ತರೂಪವಾಗಿ ಜನ್ಮತಾಳಿದ ಕಲೆ, ಕಲಾಪ್ರಕಾರಗಳ ಶೈಲಿ-ಪಂಥಗಳ ಹುಟ್ಟಿಗೂ ಕಾರಣರಾದರು.

ಚಿತ್ರಕಲೆಯನ್ನು ಕುರಿತಂತೆ, ಪ್ರಪಂಚದ ವಿವಿಧ ಭಾಗಗಳಲ್ಲಿ ಕಲಾವಿದರೆಲ್ಲರ ಕ್ರಿಯೆ-ಚಟುವಟಿಕೆಗಳು, ಬದಲಾವಣೆಯ ತಿರುವಾಗಿ ನಡೆಯುತ್ತಿರುವ ಸಂದರ್ಭದಲ್ಲಿ, ಭಾರತ ದಾಸ್ಯದಲ್ಲಿತ್ತು. ಬ್ರಿಟೀಷರಿಂದ ಮುಕ್ತರಾಗುವ, ಸ್ವಾತಂತ್ರ್ಯದ ಕಲ್ಪನೆಯಲ್ಲಿದ್ದ ನಮ್ಮವರಿಗೆ ಕಲೆಯು ದೂರವಾಗಿದ್ದದ್ದು ವಿಪರ್ಯಾಸದ ಸಂಗತಿ. ಮೊದಲ ದಿನಗಳಲ್ಲಿದ್ದ ಮೊಘಲ್ ಹಾಗೂ ಪರ್ಷಿಯನ್ ದೊರೆಗಳ ಐಷಾರಾಮದ ಜೀವನ ಕಲೆಗಳಿಗೆ ನೆರಳಾದದ್ದು ಒಂದು ಕಡೆಯಾದರೆ, ರಾಜಾಸಕ್ತಿಯ ನೆರಳಿನಲ್ಲಿದ್ದ ಕಲಾವಿದರಿಗೆ ಮುಕ್ತತೆಯನ್ನು ಕಸಿದುಕೊಂಡಂತಾಗಿದ್ದು ಒಂದು. ಆಗಿನ ರಾಜಸ್ಥಾನಗಳಲ್ಲೆಲ್ಲ ಕಲಾವಿದರು ಹೆಮ್ಮೆಗಾಗಿ ದುಡಿದರೂ, ನಿರ್ದಿಷ್ಟ ಚೌಕಟ್ಟಿನಲ್ಲಿ ಬೆಳೆಸಿದ ಕಲೆ ರಾಜಮರ್ಯಾದೆಯ ಗುರುತಾಗಿಯೇ ಉಳಿದಿದೆ. ಕೇವಲ ಸಾಂದರ್ಭಿಕ ಚಿತ್ರಗಳಿಗೆ ಸೀಮಿತವಾಗಿದ್ದ ಭಾರತೀಯ ಚಿತ್ರಕಲೆ ಕೆಲವು ಕವಲುಗಳಲ್ಲಿ ಜನ್ಮ ಪಡೆದಿದೆ. ಕಾಂಗ್ರಾ, ಬಸೋಲಿ, ಮೇವಾರ್, ಬುಂದೇಲ್‌ಖಂಡ, ಅಲಿಘರ್, ಜೈಪುರ್ ಮುಂತಾದ ಕಡೆಗಳಲ್ಲಿ ರಚಿತವಾದ ಚಿತ್ರಗಳೆಲ್ಲ 'ಚಿಕಣಿ' ಚಿತ್ರಕಲೆ ಎಂದೇ ಹೆಸರಾದವು(Miniature Paintings). ನಂತರದಲ್ಲಿ ಹುಟ್ಟಿಕೊಂಡ ಸಾಂಪ್ರದಾಯಿಕ ಚಿತ್ರಗಳು (Traditional Paintings) ಪುರಾಣಗಳ ಸಚಿತ್ರ ನಕಲುಗಳಂತೆ ನಿರ್ಬಂದಿತ ಕಲ್ಪನೆಗಳಲ್ಲೆ ಚಿತ್ರಿಸಲ್ಪಟ್ಟವು. ಆದರೂ ಕೂಡ ಚಿತ್ರಕಲೆಯನ್ನು ಕುರಿತ ಈ ಕೆಲಸಗಳನ್ನೂ ಹೆಚ್ಚಿನ ಜನ ಗುರ್ತಿಸದಾದರು. ಭಾರತೀಯರು ಕಲೆಯನ್ನು ಕುರಿತು ಚಿಂತಿಸುವ, ಬೆಳೆಸುವ ಗೊಡವೆಗೆ ಹೋಗಿರಲೇ ಇಲ್ಲ ಎಂಬುದರ ಸಾಕ್ಷಿ ಎನ್ನುವಂತೆ ಬ್ರಿಟಿಷರೇ ಕಲಾಶಾಲೆಗಳನ್ನು ತೆರೆಯಬೇಕಾಯಿತು. ಭಾರತೀಯರ ದೇಶೀಯ ಕಲೆಗಳನ್ನು ಪ್ರಾದೇಶಿಕ ಅಂಶಗಳನ್ನು ಗಮನಿಸಿದ ಬ್ರಿಟಿಷರ ಕಲಾಪ್ರಜ್ಞೆಯು ಕಲಾಶಾಲೆಗಳನ್ನು ಪ್ರಾರಂಭಿಸುವಂತೆ ಮಾಡಿತು. ಇದಕ್ಕೆ ಸನ್ನಿಹಿತವಾದದ್ದು ವಿದೇಶಿ ಕಲಾಚಟುವಟಿಕೆಗಳ ಪ್ರಭಾವವಾದರೂ,

ಭಾರತೀಯ ಕಲಾವಿದರಿಗೆ ಹೊಸ ಅಧ್ಯಯನಕ್ಕೆ ಸೂಕ್ತ ಸಮಯವೊದಗಿತು. ಬಾಂಬೆ ಮತ್ತು ಕಲ್ಕತ್ತಾಗಳಲ್ಲಿ ಕಲಾಶಾಲೆಗಳನ್ನು ತೆರೆದಾಗ, ಕಲಾಭ್ಯಾಸಿಗಳಿಗೆ ದೇಶೀಯ ಗುಣಗಳನ್ನು ಹೊಂದಿದ ಕೃತಿಗಳನ್ನು ಸೃಷ್ಟಿಸಿದರು. ಇದರಿಂದ ಭಾರತದ ಚಿತ್ರಕಲೆಯಲ್ಲಿ ಹೊಸ ಅರಿವು ಬಂದಂತಾಯಿತು.

ನಂತರದ ದಿನಗಳು ಆಧುನಿಕತೆಯತ್ತ ತಿರುಗಿರುವುದನ್ನು ಕಾಣುತ್ತೇವೆ. ವೈಚಾರಿಕ ಹಾಗೂ ವೈಜ್ಞಾನಿಕ ಪ್ರಜ್ಞೆಗಳು ಚಿತ್ರಕಲೆಯ ಮೂಲ ನೆಲೆಗಳನ್ನು ಮಾಧ್ಯಮದ ಪರಿಮಿತಿಯಲ್ಲಿ ಯೋಚಿಸುವಂತೆ ಮಾಡಿವೆ. ಈ ನಿಟ್ಟಿನಲ್ಲಿಯೇ ಸ್ವತಂತ್ರ ಅಭಿವ್ಯಕ್ತಿಯನ್ನು ಕಂಡುಕೊಂಡ ಅನೇಕ ದೇಶಗಳನ್ನು ನೋಡಬಹುದು. ಅಲ್ಲಿಯೂ ಕೂಡ ಚಿತ್ರಕಲೆಯ ಹೊಸ ಬೆಳವಣಿಗೆಯ ಸಂದರ್ಭದಲ್ಲಿ ಅನೇಕ ತೊಡಕುಗಳುಂಟಾಗಿವೆ. ಟೀಕೆ-ಟಿಪ್ಪಣಿಗಳೂ ಬಂದಿವೆ.

ಇದಾವುದರ ಪರಿವೆ ಇಲ್ಲದಂತೆ ಹೊಸ ವಿಧಾನಗಳ ಬೆಳವಣಿಗೆಯಲ್ಲಿ ವೈವಿಧ್ಯತೆಯ ದೃಷ್ಟಿಕೋನಗಳನ್ನು ಬೆಳೆಸಿಕೊಳ್ಳುತ್ತಾ ತಮ್ಮದೇ ಹಾದಿಯಲ್ಲಿ ಸಾಗಿದ ಅನೇಕ ಕಲಾವಿದರು ಪ್ರಯೋಗಶೀಲರಾಗಿದ್ದು, ಹಳತು-ಹೊಸತರ ಸಹಸಂಬಂಧಗಳೊಡನೆ ಹೊಸ ಸೃಷ್ಟಿಯ ಸಾಧ್ಯತೆಗಳನ್ನು ಕಂಡುಕೊಳ್ಳುತ್ತಿದ್ದಾರೆ. ಹದಿನೆಂಟನೆಯ ಶತಮಾನದ ಕೊನೆಯ ಒಂದೆರಡು ದಶಕಗಳಿಂದ ಪ್ರಾರಂಭವಾದ ಈ ಕ್ರಿಯಾಶೀಲ ಪ್ರಯೋಗಗಳ ಮೂಲಕ ಇಡೀ ಕಲಾಪ್ರಪಂಚವನ್ನೇ ತಮ್ಮತ್ತ ಸೆಳೆದ ದೇಶಗಳು ಮುಖ್ಯವಾಗಿ ಪ್ಯಾರಿಸ್, ಫ್ರಾನ್ಸ್, ಡಚ್, ಇಂಗ್ಲೆಂಡ್, ಜರ್ಮನಿ, ಮ್ಯೂನಿಚ್, ಲಂಡನ್, ನ್ಯೂಯಾರ್ಕ್, ಹಾಲೆಂಡ್, ಮಾಸ್ಕೋ ಇತ್ಯಾದಿ. ಅನೇಕ ದೇಶಗಳಲ್ಲಿ ಚಿತ್ರಕಲೆಯ ಅಭಿವ್ಯಕ್ತಿಯನ್ನು ಕುರಿತಂತೆ ಸಾಕಷ್ಟು ಜಿಜ್ಞಾಸೆಯನ್ನು ಸೃಷ್ಟಿಸಿದ ಕಲಾವಿದರು, ಪ್ರದರ್ಶನದ ರೂಪವನ್ನು ಬದಲಾಯಿಸಿದರು. ಅನೇಕ ಟೀಕೆ-ವಿಮರ್ಶೆ-ಬರಹಗಳೂ ಬಂದವು. ಅವುಗಳ ಮೂಲಕವೇ ಅಲ್ಲಿಯ ಕಲಾವಿದರು ಹೊಸ ಹೊಸ ರೀತಿಯನ್ನು ಕಲಿತುಕೊಳ್ಳಲು ಸುಲಭ ಮಾರ್ಗ ದೊರಕಿತು.

ನಮ್ಮ ಶೈಲಿಗಳ ಉಗಮದೊಡನೆ, ಕಲಾ ಪ್ರಪಂಚವು ವಿಶಿಷ್ಟ ತಿರುವು ಪಡೆಯುತ್ತಿರುವ ಸಂದರ್ಭದಲ್ಲೂ ನಮ್ಮ ಗಮನಕ್ಕೆ ಬಾರದೆ ಕಾಲಾವಧಿ ಸರಿದು ಹೋಗುತ್ತಿದ್ದುದು ಒಂದು ಕಡೆಯಾದರೆ, ಪಾಶ್ಚಾತ್ಯರ ಆಧುನಿಕ ಸಂದರ್ಭದ ಹೊತ್ತಿಗೆ ಪ್ರಾರಂಭವಾದ ಭಾರತೀಯ ಚಿತ್ರಕಲಾ ಚಟುವಟಿಕೆಗಳು ಮಂದಗಾಮಿಯಂತೆ ಸಾಗಿದ್ದು, ಇನ್ನೊಂದು ಕಡೆ. ಆದರೆ ಚಿತ್ರಕಲೆಯನ್ನು ಗುರುತಿಸಿ, ಬೆಳೆಸುವ ಮಹತ್ವಾಕಾಂಕ್ಷೆಯ ಕೊಡುಗೆಗಳಾದ ಬ್ರಿಟಿಷ್ ಸ್ಥಾಪಿತ ಕಲಾಶಾಲೆಗಳು ಉತ್ತಮ ಸ್ಥಾನವನ್ನು ನೀಡಿದವು. ಚಿತ್ರಕಲೆಯ ಅರಿವನ್ನು ಮೂಡಿಸಲು ಸಾಧ್ಯವಾದವು.

ಇಂದು ನಡೆಯುತ್ತಿರುವ ಮಾಧ್ಯಮದ ಬಳಕೆಯ ಸಾಧ್ಯಾಸಾಧ್ಯತೆಗಳನ್ನು ಕುರಿತ ಚರ್ಚೆ, ಸಂವಹನ ಕ್ರಿಯೆಯನ್ನು ಕುರಿತ ಪ್ರಜ್ಞೆ, ಆಂತರಿಕ ನೆಲೆಯ ಸೌಂದರ್ಯ ಪ್ರಜ್ಞೆ, ಸೃಷ್ಟಿಕ್ರಿಯೆಯ ರಸೋತ್ಪತ್ತಿಯ ಭಿನ್ನ ನೆಲೆಗಳು, ಚಿತ್ರ ಮತ್ತು ಮನಸ್ಸಿನ ಸ್ಥಿತಿಗಳನ್ನು ಕುರಿತ ಇತ್ಯಾದಿ ಅಂಶಗಳು ಪ್ರಾಯೋಗಿಕವಾಗಿ ಬೆಳೆಯಲೇಬೇಕಾದ ಸಂದರ್ಭವಾಗಿದೆ. ಪ್ರಸ್ತುತ ಭಾರತೀಯ ಕಲೆ ಸ್ವಾತಂತ್ರ್ಯಾನಂತರದ ಗುರುತರವಾದ ಬದಲಾವಣೆಗಿಂತ,

ಒಂದು ನೆಲೆಯನ್ನು ಕಂಡುಕೊಳ್ಳುತ್ತಿದೆ. ಈಗಾಗಲೇ ನಡೆದಿರಬಹುದಾದ ಬದಲಾವಣೆಗಳು ಪ್ರಾರಂಭದಲ್ಲಿರುವಂತವು.

## ಮೂರ್ತ, ಅಮೂರ್ತಗಳ ನೆಲೆ

ಕಲೆಯೊಂದರ ಸ್ವರೂಪವನ್ನು ಕುರಿತು ಮಾನಸಿಕ ಹಾಗೂ ಬೌದ್ಧಿಕ ನೆಲೆಯ ಕ್ರಿಯೆಯಾಗಿರುವ ಕಾಲ್ಪನಿಕ ಅಂಶಗಳು, ಮೂರ್ತ ಹಾಗೂ ಅಮೂರ್ತ ಕಲ್ಪನೆಯ ಅಸ್ಪಷ್ಟತೆಯಲ್ಲಿರುವಾಗ ಮೂರ್ತ ರೂಪವೇ ಪ್ರಮುಖವಾಗುತ್ತದೆ. ಈ ಮೂರ್ತರೂಪ ಪ್ರಭಾವಿಕವಾಗಿರಬಹುದು. ಸ್ವತಂತ್ರ ಕಲ್ಪನೆಯ ಸ್ವರೂಪದ್ದಿರಬಹುದು, ಅಥವಾ ನೈಜತೆಗೆ ಹತ್ತಿರವಾಗಿ, ವಿವರಣಾತ್ಮಕವಾಗಿರಲೂಬಹುದು. ಇಂತಹ ಕಲ್ಪನೆಯೇ ಮೂರ್ತ ಸ್ವರೂಪ. ಇದನ್ನೆ ನಾವು 'ಸಾದೃಶ್ಯ' ಎಂತಲೂ ಕರೆಯುತ್ತೇವೆ. ಈ ಸಾದೃಶ್ಯ ಎನ್ನುವುದು ಷಡಂಗಗಳಲ್ಲಿ ಬರುವ ಒಂದು ಭಾಗ. ಹಾಗಾದರೆ ಈ ಸಾದೃಶ್ಯ ಹೊಂದಿದ ಚಿತ್ರ ಹೇಗೆ ಕಾಣಿಸುತ್ತದೆ ಎಂದು ಕೇಳಿದರೆ, ಭಾವಚಿತ್ರದ ಕೃತಿಯಾಗಿದ್ದರೆ (ಹುಡಗನದೋ ಹುಡುಗಿಯದೋ) ಯಥಾರ್ಥವಾಗಿರುತ್ತದೆ. ಇದು ಸ್ಪಂದಿಸುತ್ತಿರುತ್ತದೆಯೆ ಹೊರತು ಇಲ್ಲಿ ತರ್ಕ, ಚಿಂತನೆ, ವಿಚಾರಗಳಿಗೆ ಆಸ್ಪದವಿಲ್ಲ ಏಕೆಂದರೆ ಇಂತಹ ಚಿತ್ರವಾಗಲಿ, ಶಿಲ್ಪವಾಗಲಿ ಸತತವಾಗಿ ಕಲ್ಪಿಸಿಕೊಂಡ/ಹೋಲಿಸಿಕೊಂಡ ನೈಜ ಕೃತಿಯಾಗುವುದರಿಂದ ಒಂದೇ ಕ್ಷಣದಲ್ಲಿ ಗ್ರಹಿಸಬಹುದಾದ ಕೃತಿಯಾಗಿ ಉಳಿಯುತ್ತದೆ. ಈಗ ಇನ್ನೊಂದು ಉದಾಹರಣೆಯನ್ನು ಗಮನಿಸೋಣ. ಒಂದು ಗಣೇಶನ ಚಿತ್ರ/ಶಿಲ್ಪ ಕೃತಿ ನಮ್ಮೆದುರಿಗಿದೆ ಎಂದಿಟ್ಟುಕೊಳ್ಳಿ. ಗಣೇಶನಲ್ಲಿರುವ ಅಂಗಭಾಗಗಳು ಬೇರೆಬೇರೆಯಾಗಿವೆ. ಅವುಗಳೆಲ್ಲ ನಿತ್ಯ ನೋಡುವ ವಸ್ತುಗಳಾಗಿರುವುದರಿಂದ ಮೊರದಗಲ ಕಿವಿ. ಆನೆಮೊಗದವ. ಕೈಕಾಲು ಸಣ್ಣ, ಹೊಟ್ಟೆ ಡುಮ್ಮ (ಕುಳ್ಳಮನುಷ್ಯ ನೆನಪು ಬಾರದಿದ್ದಲ್ಲಿ). ಇನ್ನು ಅವನ ವಾಹನ, ಆಭರಣ ಎಲ್ಲವೂ ನಿತ್ಯಕಾಣುವ ನಮ್ಮ ಕಣ್ಣಿಗೆ ಅವುಗಳ ಹೋಲಿಕೆಯೇ ಸಾರ್ಥಕವೆನಿಸುತ್ತದೆ. ಆದರೆ ಈ ಮೊದಲು ಎಲ್ಲೂ ಈ ಗಣೇಶನ ರೂಪ ಕಂಡಿರದಿದ್ದರೆ, ನಮ್ಮ ಕಲ್ಪನೆ ಬೇರೆಯದಾಗುತ್ತಿತ್ತಲ್ಲವೆ? ಹೌದು! ಆದರೆ ಇದು ಮೂರ್ತ(ಸಂಪೂರ್ಣ) ಸ್ವರೂಪದ ಕಲ್ಪನೆಯದಾಗಿದೆಯಲ್ಲ. ಹಾಗಾದರೆ ಈ ಕಲೆ ಸ್ಪಂಧಿಸುವುದಲ್ಲ ಮೆಚ್ಚುವಂತಹುದು, ಇಂತಲ್ಲಿ ನಮ್ಮ ಅನುಭವ-ಅನಿಸಿಕೆಗಳು ನಿರ್ದಿಷ್ಟಗೊಳಿಸುತ್ತವೆ. ಅಲ್ಲಿಯ ದೃಶ್ಯ/ಚಿತ್ರ/ಶಿಲ್ಪದೊಳಗಿನ ಯಾವ ಅನುಭವವೂ ನಮ್ಮದಾಗದೇ ಈಗಾಗಲೇ ಕಂಡ ಮತ್ತೆಲ್ಲಿಯದೋ ಅನುಭವವನ್ನು ನೀಡುತ್ತವೆ, ಇದರಿಂದ ಆಂತರ್ಯದ ಹೊಸಕಲ್ಪನೆಗಳು, ವಿಚಾರಗಳು ಬೆಳೆಯಲಾರದೇ ಸ್ಥಗಿತವಾಗಿ, ಕೌಶಲ್ಯದ ಅಂಗವಾಗಿ ಬಿಡುತ್ತವೆ. ಈ ಮೂರ್ತರೂಪದ ಕಲೆಯನ್ನು ಕುಶಲತೆ ಎಂದೇ ಹೇಳುತ್ತೇವೆ. ಕಲೆಯು ಮಾಡಬೇಕಾದ ಕೆಲಸವೇ ಭಿನ್ನವಾಗಿರುವುದರಿಂದ ಆಧುನಿಕತೆಯಲ್ಲಿ ಅದರ ಮಹತ್ವ ಬೇರೆಡೆಗೆ ಸಾಗಿಬಂದಿದೆ.

'ಅಮೂರ್ತ ಕಲೆ' (Abstract Art) ಎನ್ನುವುದು ಕಲ್ಪನೆಯ ಅಸ್ಪಷ್ಟತೆ, ವಿಕೋಪಗೊಳಿಸಿದ, ಅಮುಖ್ಯವಾದ ಕಲ್ಪನೆಗಳು. ಒಂದು ಸಾರಾಂಶದಲ್ಲಿನ ಒಂದು ಭಾಗವೆಂತಲೂ ಆಗುತ್ತದೆ. ಒಂದು ಭಾಷಾ ವಿಷಯದಲ್ಲಿ ಹೇಳುವುದಾದರೆ, ವಿವರದರ್ಥದಿಂದ



ಜೆ. ಎಸ್. ಖಂಡೇರಾವ್

ಹೊರಗಾದ, ಬೇರ್ಪಡಿಸಿದ, ಆಯ್ದುಕೊಂಡದ್ದು ಎಂದಾಗುವ ಅಮೂರ್ತ ಕಲ್ಪನೆಗಳು, (Abstract Images) ಅಂದರೆ ಪೂರ್ಣ ತಯಾರಿಗಳಲ್ಲದೇ ಅಪ್ರಜ್ಞಾಪೂರ್ವಕವಾಗಿ ಪ್ರಕಟವಾದ ಮನಸ್ಸಿನ ಅಭಿವ್ಯಕ್ತಿ ಅಥವಾ ವರ್ತನೆ ಎಂದು ಹೇಳಲಾಗುತ್ತದೆ. ಈ ಅಪ್ರಾಸಂಗಿಕವಾದಂತ ಕ್ರಿಯೆಯ ತೀವ್ರತೆಯ ಸಂದರ್ಭದಲ್ಲಿ ಸೃಷ್ಠಿಯಾದ ಕೃತಿಯೊಂದರ ಶೈಲಿಯೇ 'ಅಮೂರ್ತ ಕಲೆ' ಎಂತಲೂ ಕರೆಯಲಾಗುತ್ತದೆ.

ಹಾಗಾದರೆ ಅಮೂರ್ತಕಲೆ ಸೃಷ್ಟಿಯಾಗುವುದು ಹೇಗೆ ಮತ್ತು ಯಾವಾಗ? ಎಂದರೆ, ಒಂದು ಮನಸ್ಸಿನ ಭಾವನೆಗಳಲ್ಲಿ ಉತ್ಕಟವಾದ ತೀವ್ರತೆಯುಂಟಾದಾಗ, ಇದ್ದಕ್ಕಿದ್ದ ಹಾಗೆ ಹೊಳೆಯುವ ಅಸ್ಪಷ್ಟ ಕಲ್ಪನೆಗಳು ಮಿಂಚಿ-ಮಾಯವಾಗುವುದರೊಳಗೆ ಸೆರೆಹಿಡಿಯುವ ಅಥವಾ ಚಿತ್ರಿಸುವುದರಿಂದ ಅಮೂರ್ತ ಕಲೆಯ ಅನುಭವ ಕ್ರಿಯಾತ್ಮಕವಾದದ್ದನ್ನು ಹೇಳುವುದರಲ್ಲಿ ಮುಂದಾಗುತ್ತದೆ. ಅಂದರೆ ಅಲ್ಲಿಯ ಭಾವನೆಗಳಿಗೆ, ಹೊರಗಿನ ಯಾವುದೇ ವಿಷಯಗಳು/ವಸ್ತುಗಳು (Content/Objects) ಚಿತ್ರಕಾರನ ಮನಸ್ಸಿನಲ್ಲಿ ಸುಳಿಯದೆ, ಉದ್ವೇಗ/ಉತ್ಕರ್ಷಗಳ ತುಡಿತದಲ್ಲಿಯೇ ಚಿತ್ರಿಸಿದ ಕೃತಿಯು 'ಅಮೂರ್ತ ಕಲೆ'ಯದಾಗಿರುತ್ತದೆ.

ಇಲ್ಲಿ ಮುಕ್ತವಾಗಿ ವ್ಯಕ್ತವಾಗುವ ಚಿತ್ರಕಾರನ ಆಂತರಿಕ ಅಭಿವ್ಯಕ್ತಿಯೇ ಮುಖ್ಯವಾಗುವುದರಿಂದ ನಂತರದ ವಿಮರ್ಶೆ, ಚರ್ಚೆ ಇತ್ಯಾದಿ ವಿಷಯಗಳನ್ನು ಒಂದೇ ಕೃತಿಯ ವಿವಿಧ ಆಯಾಮಗಳಲ್ಲಿ ಗುರ್ತಿಸಲಾಗುತ್ತದೆ. ಅಮೂರ್ತ ಕಲಾಕೃತಿಯೊಂದು ಹಲವಾರು ವಿವರಣೆಯನ್ನು ನೀಡುವುದರಿಂದ ಅದರಲ್ಲಿ ಅಡಕವಾಗಿರುವ ಬಣ್ಣ, ಮೈವಳಿಕೆ, ಸ್ಥಳವಿಂಗಡನೆ, ರೇಖೆ, ವೇಗ ಇತ್ಯಾದಿಗಳಲ್ಲದೇ ಅಪ್ರಜ್ಞಾಪೂರ್ವಕವಾಗಿ ಬಿಂಬಿತವಾದ ವಸ್ತು (Content) ಮತ್ತು ಸಂಕೇತ (Symbol) ಬಹಳ ಮುಖ್ಯವಾಗುತ್ತವೆ. ವ್ಯಕ್ತಿಗತವಾದ ಒಂದು ಅಮೂರ್ತ ಕಲಾಕೃತಿ, ಸಾರ್ವತ್ರಿಕವಾದ ಅರ್ಥಗಳನ್ನು ಕಲ್ಪನೆಗಳನ್ನು ಪಡೆಯುವ ಹಂತಕ್ಕೆ ನಿಲ್ಲುತ್ತದೆ. ಸತತ ಭಿನ್ನವಾಗಿಯೇ ಇರುವ ಅಮೂರ್ತಕಲೆಗೂ, ಉಳಿದ ಶೈಲಿಗಳಿಗೆ ಇರುವ ಅಂತರ ಬಹಳ.

ಒಂದೇ ಒಂದು ಅಮೂರ್ತಕಲೆ, ವಿವಿಧ ಆಯಾಮಗಳನ್ನು ಸೃಷ್ಟಿಸುತ್ತಾ ಹೋಗುತ್ತದೆ. ಈ ಸೃಷ್ಟಿ ಪ್ರಕ್ರಿಯೆಯೆ ಅದರ ಸ್ಪಷ್ಟ ನಿಲುವನ್ನು ಸಾರುತ್ತದೆ.

ಈ ಶತಮಾನದ ಪ್ರಾರಂಭದಲ್ಲಿ ಪ್ರಯೋಗ ನಿರತರಾದ ಅನೇಕ ಕಲಾವಿದರಿಗೆ ಅಮೂರ್ತ ಕಲೆಯನ್ನು ಕುರಿತು, ಹೆಚ್ಚಿನ ವಿವರಣೆಯನ್ನು ನೀಡಲು ಸಾಧ್ಯವಾಗಲಿಲ್ಲ. ಅದಕ್ಕೆ ಬೇಕಾದ ವಿವರಣೆಗಳು, ಬರಹಗಳ ಮೂಲಕ ಅನಂತರದಲ್ಲಿ ಪ್ರಕಟವಾದವು. ಚಿತ್ರಕೃತಿಯೊಂದರ ಒಳಗಿನ ಗುಣಗಳನ್ನು ಕಂಡುಕೊಂಡ ನಂತರ ಅಮೂರ್ತ ಕಲ್ಪನೆಯನ್ನು ಹೀಗೆ ಹೇಳಬೇಕಾಯಿತು. "ಭಾವ ತೀವ್ರತೆಯೊಂದರಿಂದಲೇ ಚಿತ್ರಿಸಿದಾಗ ಉಂಟಾಗುವ ಕಲಾವಿದನ ಮನಸ್ಸಿನಲ್ಲಿ ಗುಣಗಳು, ಸಾಂದರ್ಭಿಕ ಅಂಶಗಳು ಚಿತ್ರದಲ್ಲಿ ಹೇಗೆ ಮೂಡಿಬರುತ್ತವೊ ಹಾಗೆಯೇ ರೇಖೆ ಮತ್ತು ಬಣ್ಣಗಳ ಮೂಲಕ, ತನ್ನಷ್ಟಕ್ಕೆ ತಾನೆ ವಿವರಣೆಯನ್ನು ನೀಡುತ್ತಿರುತ್ತವೆ. ಚಿತ್ರಕೃತಿಯ ಆವೇಗವು ಗುರಿಯ ನಿಲುವನ್ನೂ ತಿಳಿಸುತ್ತವೆ ಎಂಬ ಹೊಸ ಹೊಸ ಅನುಭವಗಳು ಇಷ್ಟರಿಂದಲೇ ನೋಡುಗನಲ್ಲಿ ಪರಿಣಾಮವನ್ನುಂಟು

ಮಾಡುತ್ತವೆ ಎನ್ನುವಂತಾಯಿತು. ಆದರೆ ಇಂತಹ ಕೃತಿಯೆದುರು ಪೂರ್ವಭಾವಿಯ ತಯಾರಿಯಿಲ್ಲದ ಸಹೃದಯನು ನಿರ್ಲಿಪ್ತವಾದ ಮನಸ್ಸಿನಲ್ಲಿ ವೀಕ್ಷಿಸಿದಾಗ ಅಮೂರ್ತ ಕಲೆಯಲ್ಲಿ, ಆತನ ಅನುಭವಕ್ಕೆ ಬರಬಹುದಾದ ಸಂಗತಿಗಳನ್ನು ಹೀಗೆ ವಿವರಿಸಬಹುದು.

1) ಎದುರು ಕಾಣುವ ಕೃತಿಯೊಳಗಿನ ಬಣ್ಣಗಳೊಡನೆ ತನ್ಮಯ ಭಾವನೆಯನ್ನು ಕಂಡುಕೊಳ್ಳುತ್ತಾನೆ.

2) ಕೇಂದ್ರೀಕೃತ ಮನಸ್ಸಿನೊಂದಿಗೆ ಕೃತಿಯನ್ನು ಗಮನಿಸುತ್ತಲೇ ಅರ್ಥ-ವಿವರಣೆಗಳನ್ನು ಕೊಡುತ್ತಾನೆ.

3) ಒಂದೊಂದು ಕ್ಷಣದಲ್ಲಿಯ ಕಣ್ನೋಟದಿಂದ ಹರಿದಾಡುವ ಮನಸ್ಸಿಗೆ ಸ್ಫೂರ್ತಿಗೊಂಡ ಅನುಭವವಾಗುತ್ತದೆ.

4) ನೋಟ, ಆಂತರಿಕ ಮಿಳಿತ, ಬೌದ್ಧಿಕ ಕ್ರಿಯೆಗಳಿಂದ ಬಾಹ್ಯವನ್ನು ಮರೆತಂತೆಯೇ ಅನುಭವವಾಗುತ್ತದೆ.

5) ಅಮೂರ್ತ-ಮೂರ್ತ ಕಲ್ಪನೆಗಳ ನಡುವೆ ಸ್ಥಿರವಾದ ಸ್ಥಾಯಿಭಾವವನ್ನು ಕಲ್ಪಿಸಿಕೊಳ್ಳುವುದಾಗುತ್ತದೆ.

6) ಕ್ಷಣಕಾಲದ ಎಲ್ಲ ಅನುಭವಗಳಲ್ಲಿ, ಹೊಸತನದ ಭಾವನೆಯುಂಟಾಗುತ್ತದೆ ಮತ್ತು ಒಟ್ಟು ಸಾರಾಂಶ ಸಂಗ್ರಹವಾಗುತ್ತದೆ.

ಹೀಗೆ ನಡೆಯುವ ನೋಡುಗನ ಮನಸ್ಸಿನ ಕ್ರಿಯೆಯಲ್ಲಿ ಮೂಡುವ ಮತ್ತೊಂದು ಪ್ರಶ್ನೆ ಏನದು!? ಪ್ರಶ್ನಾತೀತವಾದೀತು. ಆದರೆ, ಕಲಾವಿದನ ಮುಕ್ತ ಅಭಿವ್ಯಕ್ತಿಯಲ್ಲಿ ಸೃಷ್ಟಿಯಾದ ಕೃತಿಯೊಂದು, ನೋಡುಗನಲ್ಲಿ ಹೊಸತೆರನಾಗಿ ರೂಪುಗೊಳ್ಳಬಹುದು. ಅಮೂರ್ತಕಲೆಯ ಅನನ್ಯ ಸಾಧ್ಯತೆಗಳ ಮೂಲನೆಲೆ ಇರುವುದೇ ಈ ವ್ಯಕ್ತಿ ನಿಷ್ಠವಾದ ಕಲಾಭಿವ್ಯಕ್ತಿಯಲ್ಲಿ ಮಾತ್ರ. ಇಲ್ಲಿಯ ಆಕಾರಗಳೆಲ್ಲ ರೂಪಕಗಳಾಗಿಯೋ, ರೂಪಾಂತರ ಕ್ರಿಯೆಯ ಹೊಸ ಸ್ವರೂಪಗಳಾಗಿಯೋ ಪ್ರಭಾವಯುತವಾಗಿ ಹುಟ್ಟಿಕೊಳ್ಳಬಹುದು. ಬಣ್ಣಗಳಲ್ಲಿ ಹೊಸ ಅರ್ಥಗಳುಂಟಾಗಬಹುದು.

ಹೆಚ್ಚಾಗಿ ಅನುಭವಗಳು, ಅನುಭವದ ಕಡೆಗೆ ತಿರುಗಿ ಭಾವೋತ್ಕಟತೆಯನ್ನು, ತಲ್ಲೀನತೆಯನ್ನು ತರುವ ಉದ್ವಿಗ್ನ ಸ್ವರೂಪಗಳು ಪ್ರಕಟಗೊಳ್ಳುವ ಕ್ರಿಯೆ ನಡೆಯಲು ಸಾಧ್ಯವಾಗುವುದು ಈ ಕಲೆಯಿಂದ. ಆದ್ದರಿಂದಲೇ ಚಿತ್ರಕಲೆಯ ಆಧುನಿಕತೆಗೆ ಹೆಚ್ಚಿನ ಮಹತ್ವ ದೊರೆತದ್ದು ಈ ಸಂದರ್ಭದಲ್ಲಿಯೆ.

**ಶತಮಾನದ ಕಲೆ**

1880ರ ವೇಳೆಗೆ ಇಂಪ್ರೆಷನಿಸಂ ಮತ್ತು ಪೋಸ್ಟ್ ಇಂಪ್ರೆಷನಿಸಂ ಪಂಥಗಳು ಚಿತ್ರಕಲೆಯಲ್ಲಿ ಹೊಸಹಾದಿಯನ್ನು ಕಾಣುವಂತೆ ಮಾಡಿದ್ದವು. ಇವುಗಳಿಂದ ಕೆಲವು ಪ್ರಭಾವಿ ಅಂಶಗಳನ್ನು ಪಡೆದು ರೂಪಗೊಂಡಂತೆ ಬೆಳೆದು 'ಅಮೂರ್ತ ಕಲೆ' ಜನ್ಮತಾಳಿತು.

1874ರಲ್ಲಿ ಭಾವಮುದ್ರಾಪಂಥದ (Impressionism style) ಕೃತಿಗಳನ್ನು ಪ್ಯಾರಿಸ್‌ನಲ್ಲಿ ಮೊದಲಬಾರಿಗೆ ಪ್ರದರ್ಶಿಸಿದಾಗ ಜನರು ಆದರಿಸಲಿಲ್ಲ. ಪ್ರದರ್ಶನಕಾರರಾದ ಕ್ಲಾಡ್ ಮಾನೆ, ಎಡ್ಗರ್ ಡಿಗಾ, ಆಗಸ್ಟ್ ರೆನ್ವಾ ಮಾರಿಸೋಟ್, ಪಾಲ್ ಸೆಜಾನೆ, ಕ್ಯಾಮಿಲ್ ಪಿಸ್ಸಾರೋ, ಸಿಸಿಲಿ ಮುಂತಾದವರು ಕಲಾಕೃತಿಗಳ ಹೊಸ ಪ್ರಯೋಗ ಕುರಿತು ಚರ್ಚಿಸಲೇಬೇಕಾಯಿತು. ತಮ್ಮ ಅನುಭವ, ಅರ್ಥ, ವಿವರಣೆಗಳನ್ನು ಸ್ಪಷ್ಟ ನಿಲುವಿನಲ್ಲಿ ತಿಳಿಸಿ ಹೇಳಿದರು. ಇದರಿಂದ ಪ್ರಭಾವಿತಗೊಂಡ ಹೊಸ ಹಾದಿಯಲ್ಲಿ ಹೊಸ ಕಲಾವಿದರೂ ಸೇರ್ಪಡೆಯಾದರು. ಸೆಜಾನೆ, ಗಾಗಿನ್, ಸ್ಯೂರ, ಸಿಗ್ನಾಕ್ ಹೆಚ್ಚಾಗಿ ಆಧುನಿಕ ಕಲೆಯನ್ನು ಬೆಳೆಸಿದರು, ಕ್ರಿಯಾತ್ಮಕಗೊಳಿಸಿದರು.

1874ರಿಂದ 1910ರವರೆಗೂ ತನ್ನ ಪ್ರಭಾವ ಬೀರಿದ ಭಾವಮುದ್ರಾಪಂಥ, 1908-1909ರ ಸುಮಾರಿಗೆ Cubism styleನ ಜನನಕ್ಕೆ ಕಾರಣವಾಯಿತು. ಕ್ಯೂಬಿಸ್ಟ್ ಪಂಥಕ್ಕೆ ಸೇರಿದ ಬ್ರಾಕ್, ಪಿಕಾಸೋ ಲೆಝುರ್, ವಿಲಾನ್, ಡುಶ್ಯಾಂಪ್, ಅರ್ಚಿಪಿಂಕೋ ಮುಂತಾದವರು ಕ್ಯುಬಿಸಂ ಶೈಲಿಯನ್ನೇ ಆಧುನಿಕ ಕಲೆಯ ನವ್ಯಪಂಥವನ್ನಾಗಿಸಿದರು. ಕ್ಯುಬಿಸಂ ಮತ್ತು ಇಂಪ್ರೆಷನಿಸಂನ ತಂತ್ರಗುಣಗಳನ್ನು ಗಮನಿಸಿಕೊಂಡು ರಚಿಸಿದ ಚಿತ್ರಕೃತಿಗಳು ಅನೇಕ ಬುದ್ಧಿಜೀವಿ (Intellectual Artists) ಕಲಾವಿದರು ಮೆಚ್ಚಿಕೊಂಡ ನಂತರ, ಸಾಕಷ್ಟು ವಿಮರ್ಶೆಗೆ ಒಳಗಾದವು. ಹೀಗೆ ಟೀಕೆಗಳಿಗೆ ಗುರಿಯಾದ ಕಲಾಕೃತಿಗಳು ಪ್ರಥಮವಾಗಿ ಪ್ಯಾರಿಸ್ ಮತ್ತು ಮ್ಯುನಿಚ್‌ಗಳಲ್ಲಿ, 1912ರಲ್ಲಿ ಪ್ರದರ್ಶಿತವಾದವು. ಅಂದು ಪ್ರದರ್ಶಿತವಾದ ಕೃತಿಗಳೆಲ್ಲ 'ಅಮೂರ್ತತೆಯ, ಹೊಸ ವಿಧಾನವಾಗಿದ್ದವು. ಸ್ವ-ಅಭಿವ್ಯಕ್ತಿಯ (Self expression)ಅಂಶಗಳೇ ಹೆಚ್ಚಾಗಿದ್ದರಿಂದ, ಹೊರಗಿನ ಯಾವ ವಸ್ತುಗಳು, ವಿಷಯಗಳು ಅಲ್ಲಿರಲಿಲ್ಲ. ಹಾಗಾಗಿ 'ಅಮೂರ್ತಕಲೆ' ಎಂದು ಕರೆಯಲ್ಪಟ್ಟವು. ಹೀಗೆ 1912-13ರಲ್ಲಿ ಹುಟ್ಟಿಕೊಂಡ ಅಮೂರ್ತಕಲೆ, ಆಧುನಿಕ ಕಲೆಯೆಂದೇ ಒಪ್ಪಿತವಾಯಿತು. ಅತ್ಯಂತ ಮಹತ್ವವನ್ನು ಪಡೆದು ಆಧುನಿಕ ಶೈಲಿ (Modern style)ಎಂದೇ ಹೆಸರಾಯಿತು. ಆನಂತರದಲ್ಲಿ ಈ ಅಬ್‌ಸ್ಟ್ರಾಕ್ಟ್ ಕಲೆಯ ಮೂಲಸ್ವರೂಪ, ಅರ್ಥಗ್ರಹಿಕೆ, ವಸ್ತು ಹಾಗೂ ವಿಷಯಗಳ ವಿವರಗಳನ್ನು ನೀಡುತ್ತಾ ಬಂದಿತು. 1913ರಿಂದ 1915ರ ವೇಳೆಗೆ ಬಹಳಷ್ಟು ಕ್ರಿಯಾಶೀಲವಾದ ಸೃಜನಶೀಲಕಲೆಯಾಗಿ ರೂಪಗೊಂಡಾಗ ಮಾಸ್ಕೊ, ಲಂಡನ್, ನ್ಯೂಯಾರ್ಕ್, ವಿಲಾನ್ ಮುಂತಾದಕಡೆ ಬೆಳೆಯಿತು. ಅತ್ಯಂತ Concrete Artಆಗಿ ಬೆಳೆಯುತ್ತಿದ್ದರೂ, ಯಾವುದೇ ರೀತಿಯ ಶೈಲೀಕೃತ ತಂತ್ರಗಳು ಇದರಲ್ಲಿರಲಿಲ್ಲ. ಇದರ ಕಲಾವಿದರಿಗೆ ತಂತ್ರಗಳ ಅವಶ್ಯಕತೆಯೂ ಇರಲಿಲ್ಲ.

ಅಮೂರ್ತ ಕಲೆಯ ಜನಕನೆಂದೇ ಹೆಸರಾದ ವ್ಯಾಸಿಲಿ ಕ್ಯಾಂಡಿನ್‌ಸ್ಕಿ ರಷ್ಯಾದ ಪ್ರಮುಖ ಕಲಾವಿದ. ಈತನ ಹೇಳಿಕೆಗಳೆಲ್ಲ ಹೆಚ್ಚಾಗಿ ಅಬ್‌ಸ್ಟ್ರಾಕ್ಷನ್ ಅನ್ನು ಕುರಿತಾಗೆ ಇವೆ. ಇಲ್ಲಿ ಮನಸ್ಸಿನ ಸ್ಥಿತಿ, ಒತ್ತಡಗಳೇ ಪರಿಣಾಮಕಾರಿಯಾಗಿರುತ್ತಿದ್ದುದರಿಂದ, ಅಮೂರ್ತ ಕಲಾವಿದರೆಲ್ಲ ಒಂದೆಡೆ ಸೇರಿ ಹೆಚ್ಚಿನ ಕಾರ್ಯನಿರತರಾದರು. ಇದರಿಂದ ಈ ಕಲೆಗೆ ಸಾಕಷ್ಟು ಪ್ರಚಾರವೂ ದೊರೆಯಿತು. ಫರ್ಡಿನಾಂಡ್ ಲೆಝುರ್, ಡಿಲೋನೆ, ಫ್ರಾನ್ಸಿಸ್ ಪಿಕಾಬಿಯಾ, ಮಾರ್ಕ್ ಬೆಲ್ಲಾ, ಲೆವ್ಹಿಸ್ ಬೆಳಕಿಗೆ ಬಂದ ಕಲಾವಿದರಾದರು. ಬಹಳ ಮುಖ್ಯವಾಗಿ ಪಿಯೆಟ್ ಮಾಂಡ್ರಿಯನನು ಪ್ಯಾರಿಸ್, ರಷ್ಯಾ ಮತ್ತು ಹಾಲೆಂಡ್

ದೇಶಗಳಲೆಲ್ಲ ಇದ್ದುಕೊಂಡು, ಅಲ್ಲಲ್ಲಿಯೆ ಕಲೆಯ ಪ್ರಚಾರ, ಅಮೂರ್ತತೆಯ ಅರಿವನ್ನು ಮೂಡಿಸಿದ ಕಲಾಕೃತಿಗಳನ್ನು ಪ್ರದರ್ಶಿಸಿದ. ಪ್ರಯೋಗ ನಿರತರಾದ ಹೊಸ ಹೊಸ ಕಲಾವಿದರನ್ನು ಪರಿಚಯಿಸಿದ. ಕ್ಯಾಂಡಿನ್‌ಸ್ಕಿ ಮ್ಯೂನಿಚ್‌ನಲ್ಲಿದ್ದರೆ, ಮಾಲ್ವಿಚ್ ಮಾಸ್ಕೋದಲ್ಲಿದ್ದು ಕಲೆಯ ಕೆಲಸ ಮಾಡಿದರು.

ಈ ನಿರಂತರ ಚಟುವಟಿಕೆ, ಕಲಾಪ್ರದರ್ಶನ ಮತ್ತು ವೈಚಾರಿಕ ನೆಲೆಯನ್ನು ಕಂಡುಕೊಳ್ಳುವ ಚರ್ಚಾವಿಧಾನಗಳಿಂದ ಹೊಸದಾದ ವಿಮರ್ಶಾ ವಿಧಾನವನ್ನು ಹುಟ್ಟುಹಾಕಬೇಕಾಯಿತು. ಸ್ವತಃ ಕಲಾವಿದರೇ ಕಲೆಯನ್ನು ಕುರಿತು, ಅಮೂರ್ತ ಪ್ರಜ್ಞೆಗಳನ್ನು ಕುರಿತು, ಸ್ವಾನುಭವದ ವಿವರಗಳನ್ನು ತಿಳಿಸುತ್ತಾ, ಬರವಣಿಗೆಯನ್ನು ಪ್ರಾರಂಭಿಸಿದರು. ಅಮೂರ್ತ ಕಲಾಕೃತಿಗಳೆಲ್ಲ ಪ್ರಾಯೋಗಿಕ ಗುಣಗಳನ್ನು ಹೊಂದಿರುವಂತವು. ತಕ್ಷಣದ ಭಾವನೆಯನ್ನು ವ್ಯಕ್ತಗೊಳಿಸಿದ, ಕಲಾವಿದನ ಭಾವನಾಯುಕ್ತ ಚಿತ್ರಗಳೇ ಇವು ಎಂದು ತಿಳಿಸುತ್ತಾ ಬಂದರು. "ಕಲಾವಿದ ಸ್ಯೂರ ಮತ್ತು ಗಾಗಿನ್‌ರು ಹೇಳಿದಂತೆ ರೇಖೆ, ಬಣ್ಣ ಹಿನ್ನೆಲೆ, ಮುನ್ನೆಲೆಗಳು, ಮೈವಳಿಕೆಗಳೂ ಮತ್ತು ಸಂಯೋಜನೆಗಳಲ್ಲಿಯೂ ಅಮೂರ್ತಕಲೆ ಮುಖ್ಯವಾಗಿರುವ ಅಂಶಗಳನ್ನು ಹೊಂದಿದೆ. ಕ್ಯಾಂಡಿನ್‌ಸ್ಕಿ ಹೇಳುತ್ತಾನೆ "ಅಮೂರ್ತ ಕೃತಿಯ ಆಕಾರಗಳೆಲ್ಲ ತಮ್ಮಷ್ಟಕ್ಕೆ ತಾವೆ ಬೆಳೆಯುತ್ತವೆ. ಒಳಾರ್ಥಗಳನ್ನು ಪಡೆಯುತ್ತವೆ. ಸಂಯೊಜನೆಯು ತಾನಾಗಿಯೇ ವೃದ್ಧಿಗೊಳ್ಳುತ್ತದೆ", ಎಂದು. ಇದೇ ರೀತಿ ಬಣ್ಣಗಳನ್ನು ಕುರಿತು ಹೇಳುವಾಗ, ಸ್ವತಃ ತನ್ನ ಕೃತಿಯಾದ ಹಳದಿ-ಕೆಂಪು-ನೀಲಿಯನ್ನು ವಿವರಿಸುವುದಕ್ಕಾಗಿಯೇ, ಪ್ರಥಮ ವರ್ಣಗಳಾದ (Primary colours) ಕೆಂಪು, ಹಳದಿ ನೀಲಿಯನ್ನು ಪ್ರಮುಖವಾದ ಹೆಸರಿಸುತ್ತಾನೆ. ಅದನ್ನು ಕುರಿತು ಹೇಳಿಕೆಯೊಂದನ್ನು ನೀಡುವುದಕ್ಕಾಗಿ 'Point and line to Plane' ಎಂಬ ಪುಸ್ತಕವನ್ನು 1925ರಲ್ಲಿ ಪ್ರಕಟಿಸಿದ್ದಾನೆ. ಈತನ ಮೊದಲ ಪುಸ್ತಕ 'Concerning the spiritual in art' 1911ರಲ್ಲಿಯೇ ಪ್ರಕಟವಾಗಿದೆ. ಇವನ ಪ್ರಕಾರ ಬಣ್ಣಗಳೆಲ್ಲ ಭೌತಿಕವಾಗಿ, ಮಾನಸಿಕವಾಗಿ ನೋಡುಗನಲ್ಲಿ ಪರಿಣಾಮವನ್ನುಂಟು ಮಾಡುತ್ತವೆ. ಕಲಾವಿದನಿಗೆ ಒತ್ತಡವನ್ನು ತರುತ್ತವೆ. ಆತನೊಳಗಿನ inner necessityಯಲ್ಲಿ ಕಲಾತ್ಮಕವಾಗಿ, ಪ್ರಾಯೋಗಿಕವಾಗಿ ಈ ಬಣ್ಣಗಳು ಕಂಡುಹಿಡಿಯಲ್ಪಡುತ್ತವೆ. ಅಂತಃಶಕ್ತಿಯು ಮೂಲದಲ್ಲಿಯ ಅನಿಸಿಕೆಗಳಿಗೆ ಸಂಕೇತಗಳಾದ ಬಣ್ಣಗಳು, ನೈಜತೆಯ ಹೊರಗಿದ್ದು, ಕಲಾವಿದನ ಅಂತರ್ಯದಲ್ಲಿ ಹೊಸ ಅರ್ಥಗಳನ್ನು ಪಡೆಯುತ್ತವೆ," ಎನ್ನುವ ಕ್ಯಾಂಡಿನ್‌ಸ್ಕಿ, ಅಮೂರ್ತ ಕಲೆಯ ವ್ಯಾಖ್ಯೆ ತತ್ವಶಾಸ್ತ್ರಜ್ಞನ ರೀತಿಯದು. ಆದ್ದರಿಂದಲೇ ಆತನ ಹೇಳಿಕೆಗಳು ಭಾವೋತ್ಕಟವಾಗಿ ಹೊರಹೊಮ್ಮುತ್ತಿದ್ದವು. ಇದರಿಂದಾಗಿ ಅಮೂರ್ತ ಕಲೆಯು ಒಂದು ಗುಂಪೇ ತಯಾರಾಗಲು ಕಾರಣವಾಯಿತು.

ಸಂಗೀತದೊಂದಿಗೆ ಚಿತ್ರಕಲೆಯನ್ನು ಹೋಲಿಸಿ ನೋಡುವ ಕ್ಯಾಂಡಿನ್‌ಸ್ಕಿ, ಚಿತ್ರವು ದೃಶ್ಯಸಂಗೀತ (visual music) ಇದ್ದಂತೆ, ದೃಶ್ಯಕಾವ್ಯ(visual poetry)ವಿದ್ದಂತೆ ಸಂಗೀತದ ಎಲ್ಲ ಗುಣಗಳೂ (ಲಯ, ತಾಳ, ಏರಿಳಿತಗಳು ಮುಂತಾದವು) ಇವೆ ಎನ್ನುತ್ತಾನೆ. ಹೊರಗಿನ ಎಲ್ಲ ನೈಜತೆಗಳು ಕಲಾವಿದನನ್ನು ಅಂತಃಶಕ್ತಿಯನ್ನಾಗಿಸುತ್ತವೆ. ಆತನನ್ನು ಹಿಂದಕ್ಕೊಯ್ದು, ಕಲಾತ್ಮಕ ಪ್ರಯೋಗಗಳಿಗೆ ತೊಡಗುವಂತೆ ಮಾಡುತ್ತವೆ. ಅವುಗಳ ಮೂಲಕಲೆ ಅಮೂರ್ತಕಲ್ಪನೆಗಳು ಹುಟ್ಟುತ್ತವೆ ಎಂತಲೂ ತಿಳಿಸಿದ್ದಾನೆ.

## ಶೃಂಗಕ್ಕೇರಿದ ಅಮೂರ್ತ ಕಲೆ

ಅಮೂರ್ತ ಕಲೆ ಒಂದು ಪ್ರಾಯೋಗಿಕ ನೆಲೆಯನ್ನು ಕಂಡುಕೊಳ್ಳುವ ಕಾಲಕ್ಕೆ ಪಿಯೆಟ್ ಮಾಂಡ್ರಿಯನ್ (1872-1944) ಪ್ರಚಾರಕ್ಕೆ ಬರುತ್ತಿದ್ದ ಕಲಾವಿದರಲ್ಲಿ ಬಹುಮುಖ್ಯನಾದವ. ಕ್ಯಾಂಡಿನಿಸ್ಕಿಯ ಅನೇಕ ವಿಚಾರಗಳನ್ನು ಒಪ್ಪಿಕೊಂಡರೂ, ಅವನಿಗಿಂತ ಭಿನ್ನವಾಗಿ ಯೋಚಿಸಿದ ಕಲಾವಿದ. ಪ್ರಾರಂಭದಲ್ಲಿ ನೈಜತೆಯನ್ನು ಹೊಂದಿದ ಮತ್ತು ಸಾಂಕೇತಿಕತೆಯನ್ನು ರೂಢಿಸಿಕೊಂಡ ಚಿತ್ರಕಾರನಾಗಿದ್ದ ಈತ, ಪ್ರಾರಂಭದಿಂದಲೇ ಡಚ್ ಮತ್ತು ಬೆಲ್ಜಿಯಮ್‌ಗಳಲ್ಲಿ ಕಲೆಯ ಬೆಳವಣಿಗೆಯನ್ನು ಮಾಡುತ್ತಿದ್ದ, ಪ್ರಚಾರವನ್ನು ಪಡೆದ ಕಲಾವಿದನಾಗಿದ್ದ, ಜರ್ಮನಿಯ ಥಿಯೋಸೊಫಿಕಲ್ ಸೊಸೈಟಿಯ ಗುಂಪಿನಲ್ಲಿ ಒಬ್ಬನಾಗಿ ಸಾಹಿತ್ಯ ಹಾಗೂ ವೈಚಾರಿಕ ಬರಹ, ಭಾಷಣಗಳಿಂದ ಪ್ರಭಾವಿತನಾಗಿ ಅವುಗಳನ್ನು ಕುರಿತೆ, ಚಿತ್ರಕೃತಿ ಸೃಷ್ಟಿಸಿದ. ಆಗ ರೂಢಿಸಿಕೊಂಡ ಅಮೂರ್ತ ಕಲೆಯನ್ನು ಒಂದು ಪ್ರಾತಿನಿಧಿಕ ಕಲೆಯನ್ನುವಂತೆ ಮಾಡಿದ. ತನ್ನ ಅನಿಸಿಕೆ, ಹೇಳಿಕೆ, ವ್ಯಾಖ್ಯಾನಗಳನ್ನು ತನ್ನ ದಿನಚರಿಯಲ್ಲೂ ಬರೆದಿಡುತ್ತಿದ್ದ ಮಾಂಡ್ರಿಯನ್, spiritual base ಎನ್ನುವುದು ಕಲೆಗೆ ಬಹಳ ಮುಖ್ಯವೆಂದು ಹೇಳುತ್ತಾನೆ. ತನ್ನ ಜೊತೆಯಲ್ಲಿಯೆ ಯುವ ಕಲಾವಿದರನ್ನು ಎಚ್ಚರಿಸಿದ್ದ ಮಾಂಡ್ರಿಯನ್, ಪುನಃ ಸೆಜಾನ್ ಮತ್ತು ಮಾನೆಯವರ ಕೃತಿಗಳನ್ನು ಅಭ್ಯಾಸ ಮಾಡುತ್ತಾನೆ. ಆದರೆ ಈ ಇಬ್ಬರೂ ಕಲಾವಿದರು ಅಮೂರ್ತ ಕಲಾವಿದರೇನೂ ಆಗಿರಲಿಲ್ಲ. ಆಧುನಿಕ ಕಲಾವಿದರಲ್ಲಿ ಪ್ರಮುಖರಾದ ಕಲಾವಿದರಾಗಿದ್ದ ಇವರ ಕೃತಿಗಳ ಮೂಲಾಂಶಗಳು ಮಾಂಡ್ರಿಯನ್‌ಗೆ ಬಹಳಷ್ಟು ಸಹಾಯಕವಾಗಿರಬೇಕು. ಆನಂತರ ಹಾಲೆಂಡ್‌ಗೆ ತೆರಳಿದದ್ದು ಕೆಲವೇ ದಿನಗಳಲ್ಲಿ ಅಲ್ಲಿಯ ಕಲಾಪ್ರಪಂಚಕ್ಕೆ ಬಹಳ ಪರಿಚಿತನಾಗುತ್ತಾನೆ. ಇದೇ ಸಂದರ್ಭದಲ್ಲಿ ಹೊಸ ಹೊಸ ಪ್ರಯೋಗಗಳನ್ನು ಚಿತ್ರಪ್ರದರ್ಶನಗಳ ಮೂಲಕ ತೋರಿಸಿ, ಮೇಲ್ಮಟ್ಟಕ್ಕೇರಿದ ಕಲಾವಿದನೆನಿಸಿಕೊಳ್ಳುತ್ತಾನೆ.

ಇದೇ ವೇಳೆಗೆ Cubist Artನಲ್ಲಿ ಬ್ರಾಕ್ ಮತ್ತು ಪಿಕಾಸೊ ಹೆಸರಾಂತ ಕಲಾವಿದರೆನಿಸಿಕೊಳ್ಳುತ್ತಾರೆ. ಇಲ್ಲಿಯೂ ಕೂಡ ಜ್ಯಾಮಿತಿಯ ಆಕಾರದೊಳಗೆಯೆ ನಿರ್ಮಿಸಿದ ವಸ್ತುಗಳನ್ನು ವಿಶೇಷವೆನ್ನುವಂತೆ ಮಾಡುತ್ತಾರೆ. ಈ Cubist ಕಲಾವಿದರಲ್ಲಿಯೇ ಇದ್ದ Colour theorist ಎನ್ನಿಸಿಕೊಂಡಿದ್ದ ಇಜಿನ್ ಕೆವ್‌ರುಲ್, ಡೆಲೂನೆ, ಕುಪ್ಕ ಮತ್ತು ಪಿಕಾಬಿಯಾ ಸಂಪೂರ್ಣವಾಗಿ ಅಮೂರ್ತಕಲೆಯ ಕಲಾವಿದರಾಗಿಬಿಡುತ್ತಾರೆ. ತಮ್ಮ ಹೊಸ ಪ್ರಯೋಗಗಳಲ್ಲಿ ಕ್ರಿಯಾಶೀಲರಾಗಿ ತೊಡಗಿಕೊಳ್ಳುತ್ತಾರೆ. ಡೆಲೊನೆಯ ಹೆಂಡತಿ ಸೋನಿಯ ತೇರ್ಕ್ (1885-1980) ಗಂಡನೊಂದಿಗೆ ಸೇರಿ Abstract Art ಶೈಲಿಯಲ್ಲಿ ತನ್ನ ಕಲಾಕೃತಿಗಳನ್ನು ರಚಿಸುತ್ತಾಳೆ. ಅಮೇರಿಕದಲ್ಲಿ ಮಾರ್ಗನ್ ರಪೆಲ್ (1886-1953), ಸ್ಪಂಟಾನ್, ಮ್ಯಾಕ್‌ಡೊನಾಲ್ಡ್ ರೈಟ್ (1890-1973) ಇಬ್ಬರೂ ಅಬ್‌ಸ್ಟ್ರಾಕ್ಟ್ ಆರ್ಟನ್ನು ಕುರಿತು ಕಲಾ ಪ್ರದರ್ಶನ, ಭಾಷಣಗಳನ್ನು ಮಾಡುತ್ತಾರೆ. ಇದರ ಪರಿಣಾಮದಿಂದ ನ್ಯೂಯಾರ್ಕ್‌ನಲ್ಲಿ ಅಬ್‌ಸ್ಟ್ರಾಕ್ಟ್ ಆರ್ಟ್ ಜನಿಸಿ, ಬೆಳೆಯುತ್ತದೆ. ಅಮೇರಿಕೆಯ ಕಲಾವಿದನಾದ ಪ್ಯಾಟ್ರಿಕ್ ಹೆನ್ರಿಬುಸ್ ಮಾತ್ರ 1933ರಲ್ಲಿ, ಇದ್ದಕ್ಕಿದ್ದ ಹಾಗೆ, ಬೇಸರಗೊಂಡು ತನ್ನ ಕೃತಿಗಳನ್ನೆಲ್ಲ ನಾಶಮಾಡಿ, ಪ್ರದರ್ಶನವನ್ನೇ ನಿಲ್ಲಿಸಿಬಿಡುತ್ತಾನೆ. ಅಮೂರ್ತಕಲೆಯ

ಚಿತ್ರಕಲಾವಿದನಾಗಿ, ಡೆಲೊನೆಯ ಆರ್ಫಿಸ್ಟ್ ಗುಂಪಿನಲ್ಲಿ (Delannay's Orphist Group) ಸದಸ್ಯನಾಗಿದ್ದ ಈತನಿಗೆ ಅಮೂರ್ತಕಲೆಯ ವೈಚಾರಿಕ ದೃಷ್ಟಿ ಸರಿಬರಲಿಲ್ಲವೆಂದೆ ಕಾಣುತ್ತದೆ.

ಇನ್ನು ಫ್ರಾಂಕ್ ಕುಪ್ಕಾನ ಕೃತಿಗಳಂತೂ ಅಮೂರ್ತಕಲೆಯಲ್ಲಿಯೇ ಹೆಚ್ಚು ಕ್ಲಿಷ್ಟವಾದಂತವಾಗಿದ್ದವು. ವಿಶೇಷವಾದ ಹೊಸ ಕಲ್ಪನೆಯನ್ನು ನೀಡುವ ಆತನ ಕೃತಿಗಳನ್ನು ಅರ್ಥಮಾಡಿಕೊಳ್ಳಲಾಗದೇ ಪರ್ಷಿಯಾದ ಇಡೀ ಜನಸಮುದಾಯ ಅವುಗಳನ್ನು ತಿರಸ್ಕರಿಸಿಬಿಟ್ಟಿತು.

ಪ್ಯಾರಿಸ್‌ನಿಂದ ಹೊರಬಂದ ಡೆಲೊನೆ ಹೊಸ ಚಿತ್ರಗಳ ಪ್ರದರ್ಶನ ಮಾಡಿದಾಗ, ಆತನ ಸ್ನೇಹಿತರೂ ಒಟ್ಟಾಗಿದ್ದರೂ, ಬರ್ಲಿನಿನಲ್ಲಿ ನಡೆದ ಈ ಪ್ರದರ್ಶನದಿಂದ ಎಲ್ಲರಿಗೂ ಹೊಸ ಆಸಕ್ತಿಯುಂಟಾಯಿತು. ಯುವ ಕಲಾವಿದರೆಲ್ಲ ಪ್ರಭಾವಿತರಾದರು. ನಂತರ ಎಲ್ಲರೂ ಒಪ್ಪಿಕೊಂಡ ಕಲೆಯಾಗಿ ಜರ್ಮನಿಯಲ್ಲಿ ಅತಿ ವೇಗದಿಂದ ಬೆಳೆಯ ತೊಡಗಿದಾಗ, ಪ್ರಪಂಚದ ಮೊದಲ ಮಹಾಯುದ್ಧ ನಡೆದ ನಂತರ ಪಶ್ಚಿಮದ ಕೆಲವು ದೇಶಗಳಲ್ಲಿ ಅಮೂರ್ತಕಲೆ ಸ್ಥಗಿತಗೊಂಡಿತು. ಪಾಲ್ ಕ್ಲೀ (1879-1940) ಎಂಬ ಕಲಾವಿದ, ಆಧುನಿಕ ಕಲಾವಿದರಲ್ಲಿ ಪ್ರಮುಖನೆಂದು ಹೆಸರಿಸಲಾಗಿದ್ದರೂ, ಆತನನ್ನು ಪೂರ್ಣಪ್ರಮಾಣದ ಅಮೂರ್ತ ಕಲಾವಿದನೆಂದು ಮಾತ್ರ ಪರಿಗಣಿಸಲಾಗಲಿಲ್ಲ. ಆದರೆ ಆತನ Play on water, sleep ಎಂಬ ಕೆಲವು ಚಿತ್ರಗಳು ಅಮೂರ್ತಕಲೆಗೆ ಹತ್ತಿರವಾಗಿವೆ.

ರಷ್ಯಾದಲ್ಲಿ ಹೆಚ್ಚಾಗಿ ಬೆಳೆಯತೊಡಗಿದ ಈ ಕಲೆಯ, ಶೈಲಿಯ (Abstract method/style) ಮುಖ್ಯ ಕಲಾವಿದರಾದ ಕಾಸಿಮೊವ್ ಮಾಲೆವ್ಹಿಕ್, ಲಿಥುವಾನಿಯಾದ ಮಿಕೊಲುಜನ್ ಸಿರುಲಿಯೋಸಿಸ್ ಇಬ್ಬರೂ ಪುರಾಣ ಹಾಗೂ ತತ್ವಶಾಸ್ತ್ರಗಳ(Myths and philosophy) ಆಧಾರವಾಗಿ ಕೃತಿ ರಚಿಸತೊಡಗಿದರು. ಮೈಕೆಲ್ ಲಾರಿಯಾನಾಫ್ (1881-1964) ತನ್ನ ಪತ್ನಿ ನಟಾಲಿಯೊ (1889-1962)ಳೊಂದಿಗೆ ರಷ್ಯಾದಲ್ಲಿ ಹೊಸ ಚಾಲನೆಯ್ನುಟುಮಾಡಿದ. ಕ್ರಮೇಣ ಅಮೂರ್ತ ಚಿತ್ರ ಕಲಾವಿದರು ಲಾರಿಯಾನಾಫ್ ಮತ್ತು ಗೊನ್‌ಕರೂವಾ ಒಟ್ಟಾಗಿ ಓಫೆಲಾ ಬ್ಯಾಲೆಗಳಿಗೆ ಡಿಸೈನ್ (den and stages) ಮಾಡಲು ಪ್ರಾರಂಭಿಸುತ್ತಾರೆ. ಆಗ ಅಮೂರ್ತಕಲೆಯ ಕಲ್ಪನೆ, ಪ್ರಭಾವಗಳು ಈ ಡಿಸೈನ್‌ಗಳಿಂದಾಗಿ ಹೆಚ್ಚು ಪ್ರಚಲಿತವಾಗುತ್ತವೆ.

ಅನಂತರ ಇವಾನ್ ಪುನಿ (1894-1956) ಅಲೆಗ್ಸ್ಯಾಂಡರ್ ವಿಕ್ಸೆಟರ್ (1882-1949), ಲಿವುಬೋ, ಪೋಪುವಾ(1889-1974)ರಿಂದ 'Proto Abstract Art' ಎಂಬ ಪಂಥವು ಹುಟ್ಟಿಕೊಳ್ಳುತ್ತದೆ.

ಇಲ್ಲಿ, ರಷ್ಯ ದೇಶದ ರಾಜಕೀಯ ಪರಿಸರ, ಸಾಮಾಜಿಕ ಕ್ರಾಂತಿಯ ವಿಷಯಗಳು ಕೃತಿಗಳಲ್ಲಿ ಕಾಣಿಸತೊಡಗಿದಾಗ, ಈ ಕಲೆಯ ಒತ್ತಡ ಹೆಚ್ಚಾಗಿ, ಉಪಯುಕ್ತವಾಗುತ್ತದೆ. ರಷ್ಯಾದ ಕ್ರಾಂತಿಗಾಗಿಯೇ ಚಿತ್ರಗಳು ರಚಿಸಲ್ಪಟ್ಟವು. ಈ ಮಧ್ಯೆ ಸುಪ್ರಿಮಾಟಿಸಂನ

ಮಾಲೆವಿಕ್, ಕ್ಯೂಬಿಸ್ಟರ ಲಾದೆಮಿರ್ ಟಾಟ್ಲಿನ್ ನೇರವಾಗಿ ಸಾಮಾಜಿಕ ಹಾಗೂ ರಾಜಕೀಯ ಜವಾಬ್ದಾರಿಗಳನ್ನು ಕೆಣಕುವ, ಪ್ರಶ್ನಿಸುವ ರೀತಿಯಲ್ಲಿ ಅಮೂರ್ತ ಕೃತಿಗಳನ್ನು ರಚಿಸಿದರು.

ಕ್ರಮೇಣ ವಾಸ್ತುಕಲೆಯ (architectural Art) ಹಂತಕ್ಕೆ ತಿರುಗಿದ ಕಲೆ 'Constructivism' ಆಗಿ, Abstract in 3D Art ಆಗಿಯೂ ರೂಪ ಪಡೆದು ಹೊಸ ಚರಿತ್ರೆಯನ್ನು ನಿರ್ಮಿಸಿದೆ. ಈ Constructivismನ ಕೃತಿಯನ್ನು ಮೊದಲು ರಚಿಸಿದವನು ನಾಮ್‌ಗಾಬೋ (1890-1977). ನೇರವಾಗಿ ಕಬ್ಬಿಣದ ಬ್ಲೇಡುಗಳಿಂದ ನಿಲ್ಲಿಸಿ, ತಿರುಗುವಂತೆ ಮಾಡಿದ ಈ ಕೃತಿ, ತಿರುಗುಯಂತ್ರದಿಂದ ಸುತ್ತುಹಾಕುತ್ತಿರುತ್ತದೆ. ಇದೇ Abstract Constructivism style ಎನ್ನಿಸಿಕೊಳ್ಳುತ್ತದೆ. ಇದರಿಂದ ಪ್ರೇರಿತನಾದ ಹಂಗೇರಿಯಾದ ಲಸ್ಲ್‌ನೋ ಮೊಹೋಲಿ ಜರ್ಮನಿಯ ವೆಮಿರ್‌ನಲ್ಲಿ ಡಿಸೈನ್ ಸ್ಕೂಲನ್ನು ಪ್ರಾರಂಭಿಸುತ್ತಾನೆ.

ಡಚ್ ಮೂವ್‌ಮೆಂಟ್‌ನಲ್ಲಿ ಅಬ್‌ಸ್ಟ್ರಾಕ್ಟ್ ಆರ್ಟ್ ವಿಚಾರಗಳು ಬಾಹುಸ್‌ನ ವಿಚಾರಗಳಿಗೆ ಸಹಾಯಕವಾದವು. ಹೆಚ್ಚಾಗಿ ಡಿ-ಸ್ಟಿಲ್ (De-stijl) ಪತ್ರಿಕೆಯಲ್ಲಿ ಬಂದ ಲೇಖನಗಳು ವಿಚಾರಪೂರ್ಣವಾಗಿದ್ದರಿಂದ ಅಮೂರ್ತಕಲೆಗೆ ಹೆಚ್ಚಿನ ಪ್ರಚಾರದ ಅವಕಾಶವಾಯಿತು. ಕಲಾವಿದರ ಎಲ್ಲ ತತ್ವ, ವಿಚಾರ, ಅನಿಸಿಕೆ, ಹೇಳಿಕೆಗಳನ್ನು ಪರಿಗಣಿಸಿ, ಹೆಚ್ಚಿನ ಒತ್ತನ್ನು ನೀಡಿ Destijl ಪತ್ರಿಕೆ ಪ್ರಚಾರ ಮಾಡಿತು. ಪ್ರಕಟಣೆಗಳನ್ನು ಹೊರತಂದಿತು. ಈ ಪತ್ರಿಕೆಯ ಮೂಲಕವೇ ಹೆಚ್ಚಿನ ಬದಲಾವಣೆಯನ್ನು ಕಂಡುಕೊಂಡ ಮಾಂಡ್ರಿಯಾನ್, ದೃಶ್ಯಮಾಧ್ಯಮವಾಗಿ ದುಡಿಸಿಕೊಳ್ಳುವ ಚಿತ್ರಕಲೆಯನ್ನು ಅಬ್‌ಸ್ಟ್ರಾಕ್ಟ್ ಆಗಿಯೇ ಉಪಯೋಗಿಸುವ ದೃಷ್ಟಿಯಿಂದ, ಕೆಲವು ಮೂಲಭೂತ ವೈರುಧ್ಯಗಳನ್ನು ಕಂಡುಹಿಡಿದ, ಮೂಲವರ್ಣಗಳಿಗೆ ಹೊಸ ಅರ್ಥಗಳನ್ನು ಕಲ್ಪಿಸಿದ. ಇವನಂತೆ ಇತರೆ ಕಲಾವಿದರೂ ಹೊಸದನ್ನು ಗುರುತಿಸುವುದರತ್ತ ಸಾಗಿ, ಹೊರಗಿನ ಎಲ್ಲ ಆಧಾರಗಳನ್ನು ತೊರೆದರು. ಸ್ಫೂರ್ತಿಯನ್ನು ಮಾತ್ರ ಭಾವನೆಗಳ ತೀವ್ರತೆಗಾಗಿ, ಸೂಚ್ಯವಾಗಿಟ್ಟುಕೊಂಡು, ಅಮೂರ್ತ ಕಲ್ಪನೆಯನ್ನು ಸೆರೆಹಿಡಿಯುವ ತವಕದಲ್ಲಿ ಸಾಂಕೇತಿಕ ಅರ್ಥಗಳುಂಟಾದವು. ಕೇವಲ ತ್ರಿವರ್ಣಗಳಾದ ಕೆಂಪು, ಹಳದಿ, ನೀಲಿ ಬಣ್ಣಗಳನ್ನೇ ಉಪಯೋಗಿಸಿದ್ದರಿಂದ, ಪ್ರಾಯೋಗಿಕ ಅಂಶಗಳ ಕೆಲವು ಹೊಸ ತಿರುವಿನಿಂದ, ಮಾಂಡ್ರಿಯಾನ್‌ನಿಂದಲೇ Neo-Plastic Art ಎಂಬ ಶೈಲಿ ಹೊಸದಾಗಿ ಕಾಣಿಸಿಕೊಂಡಿತು. ಇದರಿಂದ 1938-40ರ ಸಮಯದಲ್ಲಿ ಮಾಂಡ್ರಿಯಾನ್ ಚಿರಪರಿಚಿತ ಕಲಾವಿದನಾಗಿಬಿಟ್ಟ. ಥಿಯೋವಾನ್ ಡೊಸ್‌ಬರ್ಗ್ ಕೂಡ Destijl ಪತ್ರಿಕೆಯಲ್ಲಿ, ಅಮೂರ್ತಕಲೆ ಕುರಿತು ಬರೆಯುವಾಗ, ಮಾಂಡ್ರಿಯಾನ್ ಕೃತಿಗಳನ್ನು ವಿವರಿಸುವಾಗ, ತನ್ನದೇ ಹೇಳಿಕೆಗಳೆನ್ನುವಂತೆ ಲೇಖನಗಳನ್ನು ಬರೆದಿದ್ದ. ಇದಕ್ಕಾಗಿ ತಾನೂ ಹೊಸ ವಿಧಾನಗಳ ಹುಡುಕಾಟ ನಡೆಸಿದ್ದರಿಂದ ವಾಸ್ತುಕಲೆಯ ನವ್ಯ ಮಾದರಿಗಳು ಕಾಣಿಸಿಕೊಂಡವು.

ನಂತರ ರಷ್ಯಾ, ಹಾಲೆಂಡ್ ದೇಶಗಳಲ್ಲಿ ಅಬ್‌ಸ್ಟ್ರಾಕ್ಟ್ ಆರ್ಟ್ ಸ್ಥಗಿತಗೊಂಡಿತು. ಬ್ರಿಟನ್ ಮತ್ತು ಇಟಲಿಗಳಲ್ಲಿ ಇಲ್ಲದಂತಾಗಿಹೋಯಿತು. ರೋಮ್‌ನಲ್ಲಿ ಜಿಯೊಕೊಮ

ಬಲ್ಲಾ Futurist Actionist ಎಂದು ಹೇಳಿಕೊಂಡು cosmic symbols ಬಳಸಿ ಚಿತ್ರ ರಚಿಸಿದ. ವಾಚ್ಯವಾಗಿ, ಪ್ರಾಯೋಗಿಕವಾಗಿ ಅಬ್‌ಸ್ಟ್ರಾಕ್ಟ್ ಆರ್ಟ್ ಎಲ್ಲಾ ಕಲಾವಿದರ ಮನ್ನಣೆ ಪಡೆದು ಪ್ರಾರಂಭದಿಂದಲೂ ಜಯಗಳಿಸಿತ್ತು. ಆದರೆ ಮಾಂಡ್ರಿಯನ್ ಮತ್ತು ಕ್ಯಾಂಡಿನ್‌ಸ್ಕಿಯರಲ್ಲಿದ್ದ ಅನೇಕ ವಿಚಾರಗಳು ಹಾಗೆಯೆ ಉಳಿದಿದ್ದವು. ಜರ್ಮನಿಯಲ್ಲಂತೂ ಕಲಾವಿದರೆಲ್ಲರಿಗೂ ಇದ್ದಕ್ಕಿದ್ದ ಹಾಗೆ ಅಬ್‌ಸ್ಟ್ರಾಕ್ಟ್ ಆರ್ಟ್ ಕುರಿತು ತಡೆಯಾಜ್ಞೆ ಮಾಡಿದ. ಕಲಾವಿದರ ಗುಂಪಿನಲ್ಲಿದ್ದ ಯುವ ಕಲಾವಿದರು ಸಣ್ಣ ಗುಂಪಾಗಿ ಪುನಃ ಪ್ಯಾರಿಸ್‌ಗೆ ತೆರಳಿದರು. ವೃತ್ತ ಮತ್ತು ಚೌಕ (Cercle et carre/ Circle and Square) ಮತ್ತು ಅಮೂರ್ತತೆ-ಸೃಜನಶೀಲತೆ (Abstraction - Creation) ಎಂಬ ಗುಂಪನ್ನು ಸ್ಥಾಪಿಸಿದರು.

ಈ ಗುಂಪಿನಲ್ಲಿ ಪ್ರಾಮಾಣಿಕವಾಗಿ ಕೆಲಸ ಮಾಡಿದ ಸ್ವೆಸ್‌ಬರ್ಗ್, ಜೀನ್ ಆರ್ಪ್ ಶಿಲ್ಪಿಗಳಾಗಿ, ಅಮೂರ್ತ ಕಲೆಯ ಸಾಧ್ಯತೆಗಳನ್ನು ಕಂಡುಕೊಂಡರು. ಕಾನ್‌ಸ್ಟಂಟಿನ್ ಬ್ರಾಂಕುಸಿಯು ಶಿಲ್ಪಗಳಲ್ಲಿ ಕಲಾತ್ಮಕ ಬೆಳವಣಿಗೆಯನ್ನು ತಂದ ಅಮೂರ್ತ ಶಿಲ್ಪದ ಕಲಾವಿದ. Constructivist Artನ ಗಾಬೊ(GABO)ನಿಗಿಂತ ಭಿನ್ನವಾದ ಈತನ ಸಂಯೋಜನೆಗಳು (ಶಿಲ್ಪದಲ್ಲಿ) ಬೆಲ್ಜಿಯನ್‌ನ ಜಾರ್ಟ್‌ವಾಂಟಾಂ ಜೆರ್‌ಲೊ ನ ಸಂಯೋಜನೆಯನ್ನು ನೆನಪಿಸುವಂತಿವೆ. 1932-40ರ ಮಧ್ಯೆ ಅಮೂರ್ತಶಿಲ್ಪ ಕಲಾವಿದರ ಗುಂಪೊಂದು ತಯಾರಾಗುತ್ತದೆ. ಇಲ್ಲಿ ಬೆಳೆದ ಬಾರ್‌ಬರಾ ಹ್ಯಾಪ್‌ವರ್ತ್- ಶಿಲ್ಪ ಮತ್ತು ಚಿತ್ರ ಕಲಾವಿದೆ. ಈಕೆಯ ಗಂಡ ಬೆನ್‌ನಿಕೋಲ್‌ಸನ್ ಇಂಗ್ಲೆಡಿನಲ್ಲಿ ವಾಸ್ತುಶಿಲ್ಪಿಯಾಗಿದ್ದರೂ ಲೆಸ್ಲಿ ಮಾರ್ಟಿನ್ ಹಾಗೂ ಗಾಬೊರ ಸಹಾಯದಿಂದ Abstract Paintingsರಚಿಸುತ್ತಾನೆ. ಸ್ವ-ಅನುಭವದ ನಂತರ Constructivismಕುರಿತ 'The Circle' ಎಂಬ ಪುಸ್ತಕ 1937ರಲ್ಲಿ ಪ್ರಕಟಿಸಿ, ಅಬ್‌ಸ್ಟ್ರಾಕ್ಟ್ ಆರ್ಟ್ ಮತ್ತು ಕನ್‌ಸ್ಟ್ರಕ್ಟಿವಿಸಂ ಆರ್ಟ್‌ನೊಂದಿಗೆ ಆರ್ಕಿಟೆಕ್ಚರ್ ಹೊಂದಿರುವ ಸಂಬಂಧವನ್ನು ವಿವರಿಸಿದ್ದಾನೆ. 1939ರಲ್ಲಿ ಹೆಚ್ಚು ಕ್ರಿಯಾತ್ಮಕವಾಗಿದ್ದ, ಚಟುವಟಿಕೆಯಲ್ಲಿದ್ದ ಅಬ್‌ಸ್ಟ್ರಾಕ್ಟ್ ಆರ್ಟ್, ಪ್ರಾನ್ಸ್ ಮತ್ತು ಇಂಗ್ಲೆಂಡ್‌ನಲ್ಲಿ ಉಳಿದರೂ, ಯುರೋಪ್‌ನಲ್ಲಿ ಅತ್ಯಂತ ಸರಳವಾಗಿ ಸ್ಥಗಿತಗೊಂಡಿತು. ಯುವ ಕಲಾವಿದರಿಗೆ ಯಾವುದೇ ಸಹಾಯ, ಅವಕಾಶಗಳಿಲ್ಲದೇ ಹೊಸ ಶೈಲಿಯೊಂದರ ಹುಡುಕಾಟ ನಡೆಸಿದರು. ಆಗ Abstraction Expressionism ಮತ್ತು Action Painting ಎಂಬ ನವ್ಯದ ಹೊಸ ಮಾದರಿಗಳು ತೀವ್ರವಾದವು.

ಇಲ್ಲಿಯವರೆ, ಅಂದರೆ 20ನೇ ಶತಮಾನದ 50-60ರ ದಶಕದವರೆಗೂ ಮೆರೆದ ಅಬ್‌ಸ್ಟ್ರಾಕ್ಟ್ ಆರ್ಟ್ (1910-1960, ಆಧುನಿಕ ಕಲೆಗೆ ಹೊಸ ಆಯಾಮವನ್ನು ನೀಡಿದ ನಂತರ, ವೈಚಾರಿಕತೆಗೆ ಎಡೆಮಾಡಿಕೊಟ್ಟಿತ್ತು. ಆದರೆ ಪುನಃ ಭಾವಚಿತ್ರ ನಿಸರ್ಗ ಚಿತ್ರಗಳ ಕಡೆ ಕಲೆ ತಿರುಗಿದಾಗ, ಅಬ್‌ಸ್ಟ್ರಾಕ್ಟ್ ಆರ್ಟ್‌ನ ಮುಖ್ಯ ಉದ್ದೇಶಗಳನ್ನು ಹೆಚ್ಚು ಗಮನಿಸಬೇಕಾಯಿತು. ಈ ಶತಮಾನದ ಪ್ರಮುಖ ಶೈಲಿಯಾಗಿದ್ದ Abstract art ಹೆಚ್ಚು ಪ್ರಚಾರವನ್ನು ಪಡೆದ, ಬುದ್ಧಿಜೀವಿಗಳಿಗೆ ತರ್ಕ-ವಿತರ್ಕಗಳ ಸೃಷ್ಟಿಯ ಮೂಲವಾಗಿದ್ದಲ್ಲದೇ, ನವೋದಯದ ಹೊಸ ಸ್ಫೂರ್ತಿಯ ಕೇಂದ್ರಸ್ಥಾನದಲ್ಲಿದ್ದ ಆಧುನಿಕ ಕಲೆ ಎನ್ನಿಸಿಕೊಂಡಿತು. ಈ ಶತಮಾನದ ಆಧುನಿಕ ಕಲೆ ಇದು ಹೇಗೆಂದು ಸರಳವಾಗಿ ಹೇಳುವುದಾದರೆ ಕನ್ನಡ

ಸಾಹಿತ್ಯ ಸಂದರ್ಭದಲ್ಲಿ ನವ್ಯ-ನವ್ಯೋದಯ ಕಾಲಬಂದಂತೆ, ಗೀತ-ಭಾವಗೀತಗಳುದಿಸಿದಂತೆ. ಹುಟ್ಟಿ ಬೆಳೆದ ಅಮೂರ್ತ ಕಲೆ ಸೃಷ್ಟಿಕ್ರಿಯೆಯ ಆಂತರ್ಯದೊಳಗಿನ ಮೂರ್ತ-ಅಮೂರ್ತಗಳ ಜಾಗೃತ ಕಲ್ಪನೆ.

## ಭಾರತೀಯ ಕಲೆಯಲ್ಲಿ

ಪ್ರಪಂಚದ ಹಲವಾರು ದೇಶಗಳಲ್ಲಿ ಚಿತ್ರಕಲೆಯನ್ನು ವಿವಿಧ ಪ್ರಯೋಗಗಳಿಗಾಗಿ, ನವ್ಯದ ಆಶೋತ್ತರಗಳ ಗುರಿಯಾಗಿ ಹೆಚ್ಚಿನ ಪ್ರಚಾರದೊಂದಿಗೆ ಬೆಳೆಸಿದರೆ, ಅದರ ಸಂದರ್ಭದಲ್ಲಿ ಭಾರತದಲ್ಲಿ ರಾಜಕೀಯ ಹಾಗೂ ಸಾಮಾಜಿಕ ಬೆಳವಣಿಗೆಯ ಪ್ರಾರಂಭದ ಹಂತಗಳಲ್ಲಿತ್ತು. ಸ್ವಾತಂತ್ರ್ಯಪೂರ್ವದಲ್ಲಿ, ಅನಂತರವೂ ಜನಜೀವನದ ಬದುಕಿನ ಭವಿಷ್ಯವನ್ನು ಮಾತ್ರವೇ ಕಾಣುತ್ತಿರುವಾಗ ಕಲೆ ಮತ್ತು ಕಲಾಪ್ರಕಾರಗಳ ಆಧುನಿಕತೆ ನಮ್ಮೊಳಗೆ ಬರಲು ಹೆಚ್ಚಿನ ಸಾಧ್ಯತೆಯುಂಟಾಗಲಿಲ್ಲ. ಅಮೂರ್ತಕಲೆಯಂತೂ ಅದರದೇ ಆದ ಸಂದರ್ಭದಲ್ಲಿ ನಮ್ಮನ್ನು ಸೇರಲಿಲ್ಲ. ಆ ಅನುಭವದ ಅಂಶಗಳೂ ನಮಗೆ ದೂರವಾಗಿಯೇ ಇದ್ದವು. ದೇಶದ ಮೂಲೆಮೂಲೆಯಲ್ಲಿ ತುಂಬಿಕೊಂಡಿರುವ ಧರ್ಮ ಹಾಗೂ ಪುರಾಣ ಕೇಂದ್ರಿತ ವಸ್ತುಗಳು, ಕಲ್ಪನೆಗಳೇ ಚಿತ್ರ ಶಿಲ್ಪಗಳಲ್ಲಿ ತುಂಬಿಕೊಂಡು, ಧಾರಾಳವಾದ ಕುಶಲತೆಯನ್ನಂತೂ ಇಂದಿಗೂ ಬೆಳೆಸುತ್ತಿವೆ. ಆದರೆ ವಾಸ್ತವವಾಗಿ ನಮ್ಮಲ್ಲಿ ನವ್ಯದ ಅನುಕರಣೆಗಳಷ್ಟೇ ಇರುವ ಕಾಲದಲ್ಲಿ, ಪಾಶ್ಚಾತ್ಯರ ಅನುಕರಣೆಯೊಂದಿಗೆ ಕಲೆಯ ಒಂದು ಸ್ಪಷ್ಟ ನಿಲುವನ್ನು ಕಾಣುತ್ತಿದ್ದೇವೆ. ದೇಶೀಯ ಗುಣಗಳನ್ನು ಗುರುತಿಸಲ್ಪಡುತ್ತಿರುವ ಇಂದಿನ ಚಿತ್ರಕಲೆಯಲ್ಲಿ ಆಧುನಿಕತೆಯನ್ನು ಹುಟ್ಟುಹಾಕುವುದರ ಜೊತೆಗೆ, ಕಲೆಯ ಬೆಳವಣಿಗೆಯೇ ಮುಖ್ಯವಾಗಿದೆ. ಒಂದು ಸಾಮಾನ್ಯ ನೆಲೆಯಲ್ಲಿ ಇನ್ನೂ ಕಲೆ ಎಂದರೇನೆಂದು ತಿಳಿಯದ ಜನತೆಯೇ ಹೆಚ್ಚಿರುವಾಗ ಭಾರತೀಯ ಕಲಾವಿದರಲ್ಲಿ, ಅಮೂರ್ತಕಲೆ ಅಸ್ಪಷ್ಟವಾಗಿದೆ. ಅದನ್ನು ಹೇಳಹೊರಟರೆ ಅಪೂರ್ಣವೇ ಎನಿಸದಿರದು. ಈ ಶತಮಾನದ ಆರಂಭದಲ್ಲಿ ಚೇತರಿಸಿಕೊಳ್ಳಲು ಮುಂದಾದ ಭಾರತೀಯ ಕಲೆ, ಬದಲಾವಣೆಯನ್ನು ಬಯಸಿ ಅನೇಕ ಪ್ರಭಾವ ಅಂಶಗಳನ್ನು ತೋರಿಸಿದೆ. ಜಾನಪದ, ಬುಡಕಟ್ಟು ಜನಾಂಗಗಳ ಮೂಲಗುಣಗಳನ್ನು ಸೇರಿಸಿಕೊಂಡ ಪೂರ್ವತಯಾರಿಯಲ್ಲಿ ಕೃತಿಯನ್ನು ಸೃಷ್ಟಿಸಿದವರಿದ್ದಾರೆ. ವೈಯುಕ್ತಿಕ ಅಭಿವ್ಯಕ್ತಿಯನ್ನು ಬೆಳೆಸಿಕೊಂಡು, ಸಾಮಾಜಿಕ ವಸ್ತುಗಳನ್ನು ಚಿಂತಿಸಿದವರಿದ್ದಾರೆ. ಆದರೆ ಅಮೂರ್ತಕಲೆಯೊಳಗೆ ಭಾರತೀಯ ಕಲಾವಿದರನ್ನು ಸೇರಿಸಲಾಗದು. ಒಂದು ದೃಷ್ಟಿಯಲ್ಲಿ ವೈಚಾರಿಕತೆಯನ್ನು ಬೆಳೆಸಿಕೊಂಡು, ಆಧುನಿಕತೆಯನ್ನು ಮೈಗೂಡಿಸಿಕೊಂಡ ಕಲಾವಿದರು ಅಮೂರ್ತಕಲೆಗೆ ಹತ್ತಿರವಾದ ಕೃತಿಗಳನ್ನು ರಚಿಸಿದ್ದಾರೆ. ರವೀಂದ್ರರು ರಚಿಸಿರುವ ಕರಡು ಚಿತ್ರಗಳೇ ಅಮೂರ್ತ ಕಲಾಕೃತಿಗಳಂತೆ ಇರುವುದು (ಅವರ ನೀಹತ್ಯ ರಚನಾ ಸಂದರ್ಭದಲ್ಲಿ ರೂಪಗೊಂಡಂತವು) ಅಂತಿಮ ಚಿತ್ರಗಳಿಗೆ ಉಳಿದಿದ್ದೊಂದು. ವಿಶೇಷ Symbolic ಮತ್ತು Expressionistic ಅಂಶಗಳನ್ನೊಳಗೊಂಡ ಕೆ.ಜಿ. ಸುಬ್ರಮಣಿಯನ್ನರ Formal and Informal ರಚನೆಗಳು ಅಭಿವ್ಯಕ್ತಿಯ ಸ್ಪಷ್ಟರೂಪವಾಗಿವೆ ಮತ್ತು ಅಬ್‌ಸ್ಟ್ರಾಕ್ಟ್ ಕಲೆಗೆ ಹೋಲಿಸಬಹುದಾದ ಕೃತಿಗಳಾಗಿವೆ (ಕೆಲವೊಂದು ಅಂಶಗಳಿಂದ). ನವ್ಯಕಲೆಯ ಹೊಸತನವನ್ನು ಚೆನ್ನಾಗಿ ಬಿಂಬಿಸುವ ಸತೀಶ್ ಗುಜ್ರಾಲ್‌ರವರ ಕೆಲವೊಂದು

ಕೃತಿಗಳು ಮಾತ್ರ (ಶಿಲ್ಪ-ಮ್ಯೂರಲ್ಸ್) ಅಬ್‌ಸ್ಟ್ರಾಕ್ಟ್ ಕಲೆಗೆ ಸೇರುತ್ತವೆ.

ಕರ್ನಾಟಕದ ಚಿತ್ರಕಲೆಯನ್ನು ಪ್ರಸ್ತುತ ಸಂದರ್ಭದಲ್ಲಿ ಗಮನಿಸಿದರೆ ಕಲೆಯ ವಿವಿಧ ಶೈಲಿಯ ಮುಖಗಳು ಕಾಣಿಸಿಕೊಳ್ಳುತ್ತಿವೆ. ಅಭಿವ್ಯಕ್ತಿಯ ಕೊರತೆಗಳು ಬಹಳಷ್ಟು ಕಡೆ ಕಾಣಿಸಿಕೊಂಡಿವೆ. ಸ್ಪಷ್ಟ-ಅಸ್ಪಷ್ಟ ನಿಲುವುಗಳಲ್ಲಿ ಪ್ರಭಾವಿ ಅಂಶಗಳು ಮಿಳಿತವಾಗಿವೆ. ವ್ಯಕ್ತಿಗತ ವಸ್ತುವಿನ ಅಭಿವ್ಯಕ್ತಿಯ ಸಾಧ್ಯತೆಗಳು ಕಡಿಮೆಯೆನಿಸಿವೆ. Distorted Artನ್ನೆ Abstract Art ಎನ್ನುವ ರೂಡಿಯಾಗಿಬಿಟ್ಟಿದೆ (Abstract Art and Distorted Art are different). ಅಮೂರ್ತಕಲೆಯ ಮೂಲವಾದ Spiritual Concepts ಅಲ್ಲಲ್ಲಿ ಇದೆ ಎಂದರೂ, ಭಾಗಶಃ ಅಮೂರ್ತಕಲೆಯ ಕೃತಿಗಳನ್ನು ಹೆಸರಿಸಲಾಗದು. ಗುರುತಿಸಬಹುದಾದ ಕೆಲವೇ ಅಂಶಗಳಲ್ಲಿ, ವಾಸುದೇವ್ ಅವರ ಕೆಲವು ಕೃತಿಗಳಲ್ಲಿಯ ವಿಷಯ ಮತ್ತು ವಸ್ತು (Subject and Objects)ಗಳನ್ನು ದೂರವಿಟ್ಟು, ಕಲಾಕೃತಿಯೊಂದನ್ನು ನೋಡಿದರೆ ಅಮೂರ್ತ ಕಲ್ಪನೆಯ ನೆಲೆಗಳು ಗೋಚರಿಸುತ್ತವೆ. ಶೆಣೈಯವರ ಬಹಳಷ್ಟು ಕೃತಿಗಳಲ್ಲಿ, ಅವರು ರೂಪಿಸಿರುವ ಉದ್ದೇಶಪೂರಿತ ಆಕಾರಗಳನ್ನು ದೂರೀಕರಿಸಿ ನೋಡುವುದಾದರೆ ಅಬ್‌ಸ್ಟ್ರಾಕ್ಟ್ ಕಲೆಗೆ ಹತ್ತಿರವಾಗಿ ನೋಡಬಹುದು. ಶೆಟ್ಟಿಯವರ ಒಂದೆರಡು ಕೃತಿಗಳನ್ನು ಅಬ್‌ಸ್ಟ್ರಾಕ್ಟ್‌ಗೆ ಹೋಲಿಸಬಹುದು. ಗ್ರಾಫಿಕ್ ಮಾಧ್ಯಮದಲ್ಲಿ Abstract Artನ್ನು ಚೆನ್ನಾಗಿ ದುಡಿಸಿಕೊಳ್ಳುವ ಸಾಧ್ಯತೆಗಳಿದ್ದರೂ ಅದು ಕಡಿಮೆಯೇ ಆಗಿದೆ.

ಹಾಗಾಗಿ, ನಾನು ಮೊದಲೇ ಹೇಳಿದ ಹಾಗೆ ನಮ್ಮಲ್ಲಿಯ ಬಹಳಷ್ಟು ಕಲಾವಿದರ ಮನಸ್ಸಿಗೆ ಅಮೂರ್ತಕಲೆಯ ಕಲ್ಪನೆಯಾಗಲಿ, ಅನುಭವದ ಪರಿಯನ್ನು ದಾಟಿ, ಹೊರನಿಲ್ಲುವ ವಿಶೇಷ ಗುಣಗಳನ್ನು ಹೊಂದಿಲ್ಲ. ಇದರ ಅನನ್ಯತೆಯನ್ನು ಸರಳವಾಗಿ ಪರಿಗಣಿಸುವ ಸಾಧ್ಯವಿಲ್ಲ. ಅದು ಸೃಷ್ಟಿಸಿದ ಇತಿಹಾಸ ನವ್ಯಕಲೆಗೆ ಹೊಸದಾರಿಯನ್ನು ತೋರಿಸಿದೆ. ಆಧುನಿಕ ಕಲೆಯ ಹೊಸ ಮಾದರಿಗಳು ಕಾಣಿಸಿಕೊಳ್ಳುವಂತಾಗಿದೆ. ಆದ್ದರಿಂದಲೇ ಅಮೂರ್ತಕಲೆ ಒಂದು ಅಂತಃಶಕ್ತಿ ಸ್ಫೂರ್ತಿ.

ಅದರ ವಿಚಾರಗಳಿಂದಲೇ ಜನಿಸಿದ Cubism, Constructivism, Dadaism, Neo-Expressionism. Design, Applied Art, Architectural Design ಅಲ್ಲದೇ Serrealistic Inaguration ಕೂಡ ಇದರಿಂದಲೆ ಬಂದಿತೆಂದರೆ ತಪ್ಪಾಗಲಾರದು.

ನಿಜವಾದ ಲಲಿತಕಲೆಯ ಗುಣಗಳನ್ನು ಸೃಷ್ಟಿಸುವಲ್ಲಿ ತನ್ನತನದ ಹೊಸಮಾರ್ಗದ ಸೌಂದರ್ಯ ಪ್ರಜ್ಞೆಗೆ ಕಾರಣವಾದಂತಃ, ಪೂರ್ವಾಭಿವ್ಯಕ್ತಿಯ ಸ್ವತಂತ್ರ ಶಕ್ತಿಯಾಗಿದ್ದ ಅಮೂರ್ತಕಲೆ, ನವ್ಯ ಹಾಗೂ ಆಧುನಿಕ ಶೈಲಿಗಳ ಕ್ರೂಢೀಕರಣದ ಒಟ್ಟು ಮೊತ್ತ.

ಇಂದು ಕಲೆ ಹಾಗೂ ಜನಸಾಮಾನ್ಯರ ನಡುವೆ ಭಾರೀ ಅಂತರವಿದೆ. ಇಂದಿನ ಸಮಕಾಲೀನ ಕಲೆಯು ಜನಸಾಮಾನ್ಯರಿಗೆ ಅರ್ಥವಾಗದಿರುವುದೇ ಇದಕ್ಕೆ ಕಾರಣ ಎಂದು ಹಲವರ ಅಭಿಪ್ರಾಯ. ದೃಶ್ಯ ಕಲೆಗಳನ್ನು ಆಸ್ವಾದಿಸುವ ದೃಷ್ಟಿಯಿಂದ ನಮ್ಮ ಸಾಮಾನ್ಯ ಶಿಕ್ಷಣದಲ್ಲೂ ಗಂಭೀರ ಪ್ರಯತ್ನಗಳು ನಡೆಯುತ್ತಿಲ್ಲ. ಅಂತೆಯೇ ಈ ಕೊರತೆಗಳನ್ನು ಸ್ವಲ್ಪವಾದರೂ ತುಂಬುವುದು ಈ ಜನಪ್ರಿಯ ಕಲಾಮಾಲಿಕೆಯ ಆಶಯ. ಹೀಗೆ ಸಾಮಾನ್ಯರಿಗೆ ದೃಶ್ಯಕಲೆಗಳ ಪ್ರಾಥಮಿಕ ಜ್ಞಾನ ಒದಗಿಸುವ ದೃಷ್ಟಿಯಿಂದಲೇ ಇದನ್ನು ರೂಪಿಸಲಾಗಿದೆ. ಇದರಲ್ಲಿ ದೃಶ್ಯಕಲೆಯ ತಾತ್ವಿಕ ಅಂಶಗಳು, ಮಾಧ್ಯಮಗಳು, ತಂತ್ರಗಳು, ಇತಿಹಾಸ, ಆಧುನಿಕ ಕಲಾ ಪಂಥಗಳು ಇತ್ಯಾದಿ ಹಲವು ವಿಷಯಗಳನ್ನು ಕುರಿತಂತಹ ಹೊತ್ತಿಗೆಗಳನ್ನು ತರುತ್ತಿದ್ದೇವೆ. ತನ್ಮೂಲಕ ದೃಶ್ಯಕಲೆಯನ್ನು ಆಸ್ವಾದಿಸುವ ದಿಸೆಯಲ್ಲಿ ಹೆಚ್ಚಿನ ಜನರು ತೊಡಗುತ್ತಾರೆಂಬ ಮಹತ್ವಾಕಾಂಕ್ಷೆ ಈ ಮಾಲಿಕೆಯದು. ಹೀಗೆ ಜನರನ್ನು 'ಸಹೃದಯ' ರನ್ನಾಗಿಸುವ ದಿಸೆಯಲ್ಲಿ ಇದೊಂದು ಪುಟ್ಟ ಪ್ರಯತ್ನ.

ಎಚ್. ಎ. ಅನಿಲಕುಮಾರ್
ಸಂಪಾದಕರು